ವರುಷ—೨ ಕುಸುಮ—೪

# ಪ್ರಣಯ

( ಸಂಸಾರಚಿತ್ರಗಳು-ಪತ್ರರೂಪದಲ್ಲಿ )



ಲೇಖಕರು

ಶ್ರೀ ತಿ. ಶಿದ್ದಪ್ಪ

ಸಹಾಯ-ಸಂಪಾದಕ, 'ನವಯುಗ', ಹುಬ್ಬಳ್ಳಿ



ಆನಂದ ಗ್ರಂಥಮಾಲಾ, ಹುಬ್ಬಳ್ಳಿ.

ಫೆಬ್ರುವರಿ ೧೯೩೨

ಸಾದಾ ಪ್ರತಿ: ೧-೪-೦

ಉತ್ತಮ ಪ್ರತಿ: ೨-೪-೦

## — ಸಲಹೆಗಾರರು —

ಶ್ರೀ. ಎಸ್. ಆರ್. ಮಳಗಿ ಎಂ. ಎ. ಬಿ. ಟಿ.
ಶ್ರೀ. ಎಸ್. ಕೆ. ಕುಲಕರ್ಣಿ ಎಂ. ಎ. ಬಿ. ಟಿ.
ಶ್ರೀ. ಆರ್. ಎ. ಕುಲಕರ್ಣಿ ಎಂ. ಎ.,
ಶ್ರೀ. ದೇಸಾಯಿ ದತ್ತಮೂರ್ತಿ



—ಸಂಪಾದಕರು—

**ಶ್ರೀ ಪಿ. ವೆಂಕೋಬಾಚಾರ್ಯ** ಬಿ. ಎ., ಬಿ. ಟಿ.



## ಈ ಮಾಲೆಯಲ್ಲಿ ಮುಂದೆ ಬರಲಿರುವ ಪುಸ್ತಕಗಳು

| | |
|---|---|
| -ದು ಕಾದಂಬರಿ | ಪ್ರೊ. ದ. ರಾ ಬೇಂದ್ರೆ ಎಂ. ಎ |
| ಸುವರ್ಣದೀಪ: (ಕಾದಂಬರಿ) | ಶ್ರೀ ಅ. ನ. ಕೃಷ್ಣರಾಯರು |
| ಪೀರೆ ಮತ್ತು ಜೀನ್: ,, | (ಗಾಯ್-ದ-ಮೋಪಾಸಾ) |
| ರುಕ್ಮಿಣಿ: ,, | ಶ್ರೀ ಮುನಿಮಾಣಿಕ್ಯಂ ನರಸಿಂಹರಾವ್ |
| ಕಾಂತಂ ಕತೆಗಳು: (ಜೀವನ ಚಿತ್ರಗಳು) | ಶ್ರೀ ಪಿ. ವೆಂಕೋಬಾಚಾರ್ಯ, |


ಮುದ್ರಕರು
**ಕೆ. ಜಿ. ತಾಪಸ** B. A.

ಪ್ರಕಾಶಕರು
**ಪಿ. ವಿ. ಆಚಾರ್ಯ & ಕಂ.**

ಒಡೆಯರು
**ಸುಧಾ ಪ್ರೆ. ಹುಬ್ಬಳ್ಳಿ**

ಸಂಚಾಲಕರು
**ಆ. ಗ್ರಂ. ಮಾಲಾ, ಗವಳೀಗಲ್ಲಿ ಹು.**



ಶ್ರೀಃ

ಮಂತ್ರಾಲಯದ

# ಶ್ರೀ ರಾಘವೇಂದ್ರ ಸ್ವಾಮಿಗಳ

ಬೃಂದಾವನದ ಅಡಿದಾವರೆಗಳಲ್ಲಿ

ಭಕ್ತಿಯ ಅಂಜಲಿ

# ಅರ್ಪಣೆ

ಶ್ರೀ ರಾಘವೇಂದ್ರಾಯನಮಃ



## ಶ್ರೀ ಗುರುರಾಜ ಶ್ರೀ ರಾಘವೇಂದ್ರಸ್ವಾಮಿಗಳ ಬೃಂದಾವನದ ಅಡಿದಾವರೆಗಳಲ್ಲಿ

ಭಕ್ತಿಪೂರ್ವಕವಾದ ನಿವೇದನೆ



**ಶ್ರೀ ಮಂತ್ರಾಲಯದ ಗರುದೇವ,**

ನಿಮಗಿದೇ ಒಪ್ಪಿಸಿರುವೆನು. ಈ ನುಡಿ ಕಾಣಿಕೆಯನ್ನು. ಪಾವಿತ್ರ ಚೇತನ, ಪಾವಿತ್ರ ಪ್ರೇರಣೆಯಿಂದ ಬರೆದ ಪೂರ್ಣಿಮಾ ನಿಮ್ಮ ಪದ ಪಂಕೇಜದ ಮೇಲೆ ಭಕ್ತಿಯ ಎಸಳಾಗಿ ಬಂದು ಬಿದ್ದಿದೆ. ಸ್ವೀಕರಿಸಿ, ಅನುಗ್ರಹಿಸೈ ಸ್ವಾಮೀ.

ಪೂರ್ಣಿಮೆಯ ಗಂಡನಾಗಿ ಪೂರ್ಣಿಮೆಯನ್ನು ಕುರಿತು ಬರೆದ ಪತ್ರಗಳಿವು. ಆಕೆಯನ್ನು ಕುರಿತು ನನ್ನ ಜೀವನವನ್ನು ನಿಮಗೂ ಸಹೃದಯಿಗಳಿಗೂ ನಿವೇದಿಸುವ ನಿವೇದನವಿದು. ಯಾವುದನ್ನೂ ಮುಚ್ಚಿಕೊಂಡಿಲ್ಲ. ಏನನ್ನೂ ಕೊಚ್ಚಿಕೊಂಡಿಲ್ಲ. ಎದೆ ಬಿಚ್ಚಿದ ಮಾತುಗಳಲ್ಲಿ ಮನದಲ್ಲಿ ಪ್ರಸಂಗಗಳ ಪರಿಣಾಮದಿಂದ ಉಕ್ಕಿಬಂದ ಭಾವನೆಯ ರಸದಲ್ಲಿ ಅದ್ದಿ ಬರೆದಿರುವೆನು. ಈ ಜೀವನ ನಿವೇದನೆಯಿಂದ ನಾನು ಕನ್ನಡಿಯ ಮುಂದೆ ಕುಳಿತುಕೊಳ್ಳಲು ಮಾತ್ರ ಪ್ರಯತ್ನಿಸಿರುವೆನು.

ನಾನು ಮೈಸೂರು ಸೀಮೆಯ ಎಲ್ಲೆಯನ್ನು ಅಕಸ್ಮಾತ್ ಬಿಡಬೇಕಾಗಿ ಬಂದಾಗ, ಮತಿ ಗತಿ ಶೂನ್ಯವಾಗಿ ವಿಭ್ರಾಂತನಾದಾಗ, ಮಾನವು ಪೇಟೆಯಲ್ಲಿ ಮಾರಿಹೋಗುತ್ತಿದ್ದಾಗ ಆ ಐದು ವರುಷಗಳ ಹಿಂದಿನ ದಿನಗಳಲ್ಲಿ ಎಲ್ಲಿಗೆಂಬುದನ್ನು ಅರಿಯದೆ ರೈಲು ಹತ್ತಿದಾಗ ನನ್ನನ್ನು ಶ್ರೀಮಂತ್ರಾಲಯಕ್ಕೆ ಕರೆಯಿಸಿಕೊಂಡಿರಿ. ಮೊದಲ ಕ್ಷಣದಲ್ಲಿ ಉಪೇಕ್ಷಿಸಿ ಆ ನ ಂ ತ ರ ವೇ ಅನುಗ್ರಹಿಸಿದಿರಿ. ಪತ್ರಿಕೋದ್ಯಮರಂಗಕ್ಕೆ ದಾರಿತೋರಿಸಿ, ನೂಕಿದಿರಿ. ಅಂದಿನಿಂದ ನನ್ನ ಲೇಖನಿಯು ನಿಮಗೆ ಶರಣು ಹೋಗಿದೆ. ನಾನು ಮರದ ವೀಣೆಯು ಮಾತ್ರ. ಆದರೆ ಅದರ ತಂತಿ, ಸ್ವರ, ಮೀಟುವ ಕೈ ಎಲ್ಲವೂ ನೀವೆ ಆಗಿರುವಿರಿ.

ಇಂದು ಈ "ಪೂರ್ಣಿಮಾ" ಬೆಳಕಿಗೆ ಬರುತ್ತಿರುವುದು ತಮ್ಮ ಕೃಪಾ ದೃಷ್ಟಿಯ ಫಲವೆಂದೇ ನಂಬಿಕೊಂಡಿರುವೆನು. ಇದನ್ನು ಬರೆದು ಮುಗಿಸಲು ಬೇಕಾದ ಭಾವನೆ, ಸನ್ನಿವೇಶ, ಉದ್ವೇಗ, ಉದ್ರೇಕ, ಹುಮ್ಮಸ್ಸ, ಇವೆಲ್ಲವನ್ನೂ ಕಾಲಕಾಲಕ್ಕೆ ಮಳೆ, ಬಿಸಿಲು, ಗಾಳಿಯನ್ನು ನೀನು ಬೆಳೆಗೆ ಕೊಡುವಂತೆ ನನಗೆ ತಿಳಿಯದಂತೆ ದಯಪಾಲಿಸಿ ಬರೆಸಿದ ತಮ್ಮ ಚರಣ ಸನ್ನಿಧಿಯಲ್ಲಿ ಒಪ್ಪಿಸಿ ಬಿಡುವುದರಿಂದ ಕೆರೆಯ ನೀರನ್ನು ಕೆರೆಗೆ ಚಲ್ಲುವಂತಾಗುವುದು.

ಗುರುರಾಯರೇ, ನನಗೊಡ್ಡಿರುವ ಪರೀಕ್ಷೆಯು ಎಂದು ಮುಗಿಯುವದೆಂಬುದನ್ನು ನಿಮ್ಮನ್ನು ಕೇಳಿಕೊಳ್ಳುವದಕ್ಕಿಂತ ನೀವೇ ಈ ಪರೀಕ್ಷೆಯಲ್ಲಿ ನನ್ನನ್ನು ತೇರ್ಗಡೆ ಹೊಂದುವಂತೆ ಕರುಣಿಸಿರೆಂದು ಕೇಳಿಕೊಳ್ಳುವುದೇ ಸರಿ. ನಾನು ಮೊದಲೇ ನಿವೇದಿಸಿಕೊಂಡಿರುವಂತೆ ನನಗೆ ಮಂತ್ರಬಲವಿಲ್ಲ; ಸಂಸ್ಕಾರದ ನೆರವಿಲ್ಲ; ಭಕ್ತಿಯೂ ಇಲ್ಲ. ಆದುದರಿಂದ ನನ್ನಲ್ಲಿರುವ ಅನನ್ಯ ಶರಣತ್ವ ಒಂದನ್ನೇ ಫಲ, ಪುಷ್ಪ, ಮಂತ್ರಾಕ್ಷತೆ, ಭಕ್ತಿಯೋಗವೆಂದು ಬಗೆದು ನನ್ನನ್ನು ಉದ್ಧರಿಸಿರಿ.

ನನ್ನನ್ನು ನಿಮ್ಮ ಸಾಧನವನ್ನಾಗಿ ಉಪಯೋಗಿಸಿಕೊಳ್ಳಿರಿ. ಇಲ್ಲವಾದರೆ ಹೀಗೆಯೇ ಭಾವನೆ, ವ್ಯಸನ, ವಿಷಯ ಇವುಗಳಿಗೊಳಗಾಗಿ ಮುಳುಗ

ದೆಯೂ, ದಡವುಟ್ಟದೆಯೂ ಹುಟ್ಟು-ಸಾವುಗಳ ತಿರುಗಣೆಯಲ್ಲೇ ಇರಬೇಕಾಗುವುದು. ಅನಾಥರೇ, ದರಿದ್ರರೇ, ದೀನರೇ, ಸಾಮಾನ್ಯರೇ, ಈಶ್ವರನ ಕೈಯಕೋದುಗಳು ಎಂದು ಸ್ವಾಮಿ ವಿವೇಕಾನಂದರು ಅಂದ ಮಾತು ನನ್ನ ಸೆನಸಿಗೆ ಬರುತ್ತದೆ. ಹೇ ಗುರುದೇವಾ, ಅಂತೆಯೇ ನಾನು ಅನಾಥ ಪಾಮರ, ದೀನ, ಮತ್ತು ದರಿದ್ರನಿರುವೆನು; ಕಾರಣ ನಾನು ನಿಮ್ಮ ಕೋದುವಾಗುವಂತೆ ನಿಮ್ಮ ಶಕ್ತಿಯನ್ನು ತುಂಬಿಕೊಳ್ಳಲು ಇನ್ನುಳಿದ ಯೋಗ್ಯತೆಯನ್ನು ದಯಪಾಲಿಸಬೇಕೆಂದು ಬೇಡುತ್ತ ಈ ನನ್ನ ಎದೆಯ ಒಳಚಿತ್ರವಾದ "ಪೂರ್ಣಿಮೆ" ಯನ್ನು ಭಾವಭಕ್ತಿಯಿಂದ ಅರ್ಪಿಸುತ್ತೇನೆ. ಪ್ರೀತಿ-ವಾತ್ಸಲ್ಯಗಳಿಂದ ಸ್ವೀಕರಿಸಿ ಉದ್ಧರಿಸಿರಿ.

ಹುಬ್ಬಳ್ಳಿ
೨೮-೧-೫೨

ಇತಿ ನಿಮ್ಮ ಕರುಣೆಯ ಕಂದ,
ತಿ. ಶಿದ್ದಪ್ಪ

---

# ನನ್ನ ಅರಿಕೆ

ಸಹೃದಯಿಗಳೇ,

ನಾನೊಬ್ಬ ಕೇವಲ ಪ್ರಾಕೃತನು. ಲೋಕದ ತುಂಬ ಶೋಕದ ಸಾಗರವನ್ನೇ ನೋಡುತ್ತಿರುವ ಶೋಕಜೀವಿ ನಾನು. ಒತ್ತಿ ಬಂದ ದುಃಖವನ್ನು ತಡೆದು ಹಿಡಿದುಕೊಳ್ಳುವುದರಲ್ಲಿ ಸೆಣಸಿ, ಒಮ್ಮೊಮ್ಮೆ ಈ ಸೆಣಸಾಟದಲ್ಲಿ ಗೆದ್ದಾಗ ಅದುವೆ ಸುಖ, ಅದುವೇ ಸಮಾಧಾನವೆಂದು ಜೀವನವನ್ನು ನೂಕುತ್ತಿರುವವ ನಾನು. ಇಂತಿರುವ ನಾನು ಬರೆದಿರುವ ಪೂರ್ಣಿಮಾ ಎಂದೂ ಪಂಡಿತರು ಮೆಚ್ಚಿಕೊಳ್ಳುವ ಸಾಹಿತ್ಯವಾಗಲಾರದು. ಓದುಗರು ಒಪ್ಪಿಕೊಳ್ಳುವ ಪುಸ್ತಕವಾಗಲಾರದು. ಇದರಲ್ಲಿ ಅಲ್ಲಾಉದ್ದೀನನ ಅದ್ಭುತ ದೀಪವಿಲ್ಲ. ಅರ್ಜುನನ ಮೂರುಲೋಕದ ಗಂಡಸುತನದ ಗಂಡುಗಲಿ ಕತೆಯಿಲ್ಲ. ನಾನು ಕಾಣದ ದೇವಲೋಕ, ಪಾತಾಳಲೋಕ ಇವುಗಳ

ವಿಚಾರವಿರದೆ ನಾನಿರುವ ಈ ಲೋಕದ ನಿತ್ಯಜೀವನದಲ್ಲಿ ರಸ ಮತ್ತು ಹಾಗು ವಿಷನಿಮಿಷಗಳ ಚಿತ್ರಣವೇ ಈ ಪೂರ್ಣಿಮೆಯ ಕಥಾವಸ್ತು.

ಪೂರ್ಣಿಮೆ ನನಗನ್ಯಗಳಲ್ಲ. ನಾನೇ ಆಕೆಯ ಒಡೆಯ. ನನ್ನ ಹದಿನೈದು ವರುಷದ ಜೀವನದ ಸಂಗಾತಿ; ನಾನು ಬಳಲಿದಾಗ, ಬಾಯಾರಿಕೆಯಾದಾಗ ಜೇನಹನಿಯನ್ನುಣಿಸುವಳು. ನಾನು ಆಕೆಯೊಂದಿಗೆ ಬೆರೆತ ಸಂಸಾರ ನೌಕದಲ್ಲಿ ಏನನ್ನು ಕಂಡೆನೋ ಅದನ್ನು ಕುರಿತು ಆಕೆಗೆ ಬರೆದ ಪತ್ರಗಳಿವು. ಪುನಹ ಬರೆಯಲೆಂದು ಸನ್ನಿವೇಶಗಳನ್ನು ಕಲ್ಪಿಸಿ ನೆಯ್ದಿರುವ ಕಥಾವಸ್ತು ಇದರಲ್ಲಿ ಒಂದೂ ಇಲ್ಲ. ಇಂತಹ ಒಂದು ಸಾಮಾನ್ಯ ಜೀವನದ ಚಿತ್ರವನ್ನು ಪುಸ್ತಕರೂಪಕ್ಕೆ ತರಲು ನಾನು ಸಹಾಸಮಾಡಿದವನಲ್ಲ. ಈ ಸಾಹಸ, ಇದನ್ನು ಪ್ರಕಟಿಸಲು ಸೊಂಟಕಟ್ಟಿದ ಆನಂದ ಗ್ರಂಥಮಾಲೆಯ ಸಂಪಾದಕರು ಶ್ರೀ ವೆಂಕೋಬಾಚಾರ್ಯ ಇವರ ಗಟ್ಟಿಗತನದ ಸಾಹಸವೆಂದೇ ಹೇಳಬೇಕು. ಅವರ ಉತ್ಸಾಹವನ್ನು ನೋಡಿ ನನಗೆ ನನ್ನಾಕೆಗೆ ಕಳೆದ ನಾಲ್ಕು ವರುಷಗಳಿಂದ ಬರೆದ ಪತ್ರಗಳ ಕಂತೆಯನ್ನು ಹುಡುಕುವ ಉತ್ಸಾಹವು ಬಂದಿತು. ಅವುಗಳಲ್ಲಿ ಕೆಲವನ್ನು ಒಟ್ಟುಗೂಡಿಸಿ ಸಂಪಾದಿಸಿ, ಪ್ರಕಟನೆಗೆ ಕೊಡುವ ಧೈರ್ಯದಿಮಾಡಿದೆ. ಇದುವೇ ಪೂರ್ಣಿಮೆಯು ರೂಪು ತಾಳಿದ ಇತಿಹಾಸ.

ಬರೆದ ಮತ್ತು ಬರೆಯುತ್ತಿರುವ ಪತ್ರಗಳಲ್ಲಿ ಕೆಲವಷ್ಟನ್ನೇ ಇಲ್ಲಿ ಆರಿಸಿ ಕೊಟ್ಟಿರುವುದರಿಂದ ಒಂದು ಪತ್ರಕ್ಕೂ ಇನ್ನೊಂದು ಪತ್ರಕ್ಕೂ ಕಾದಂಬರಿಯ ಅಧ್ಯಾಯಗಳಂತಾಗಲಿ, ಕತೆಯ ಪ್ರಕರಣಗಳಂತಾಗಲಿ, ಸಂಬಂಧ ಕಾಣುವುದು ಸಾಧ್ಯವಿಲ್ಲ. ಒಂದೊಂದು ಕಾಗದ ಒಂದೊಂದು ಬಗೆಯ ಸ್ಥಿತಿಗಳಿಗೆ ಸಮಯ ಸನ್ನಿವೇಶಗಳಿಗೆ ಹೊಂದಿಕೊಂಡಿರುವುದನ್ನು ಗಮನಿಸಬೇಕಾಗಿ ವಿನಂತಿ.

ಪತ್ರಿಕೋದ್ಯಮಿಯಾದ ನನ್ನ ಕಸಬು ಬರೆಯುವುದಾದರೂ ನನ್ನ ಇದುವರೆಗಿನ ಈ ಕ್ಷೇತ್ರಜೀವನದಲ್ಲಿ ನಿಮ್ಮೆಲ್ಲರ ಮುಂದೆ ಪುಸ್ತಕರೂಪದಲ್ಲಿ ಮೊಟ್ಟಮೊದಲಾಗಿ ಬರುತ್ತಿರುವ ಬರಹವೆಂದರೆ "ಪೂರ್ಣಿಮಾ." ಪುಸ್ತಕದ

ರೂಪವನ್ನು ಪಡೆದು ಇದು ಪುಸ್ತಕವಾಗಿದೆ ಅಷ್ಟೇ ಎಂಬ ಅಂಶವನ್ನು ಗಮನಿಸಿ ಇದರಲ್ಲಿರುವ ಗುಣ ಲೋಪ ದೋಷಗಳನ್ನೆಲ್ಲಾ ಪರಿಶೀಲಿಸಿ ಲೋಪಗಳನ್ನು ಸಹಿಸಿಕೊಂಡು, ನನ್ನ ಬಾಳಕತೆಯ ಮುಂದಿನ ಬೆಳವಣಿಗೆಗಾಗಿ ನೀವೆಲ್ಲರೂ ಸಹಾನುಭೂತಿಯನ್ನು ತೋರಿ ಹರಕೆಗಳನ್ನು ಕೊಡಬೇಕಾಗಿ ಕೇಳಿಕೊಳ್ಳುತ್ತೇನೆ. ಹಂಸಕ್ಷೀರ ನ್ಯಾಯದಂತೆ ಈ ಪುಸ್ತಕದ ಒಪ್ಪುತಪ್ಪುಗಳನ್ನು ಸಹಿಸಿಕೊಳ್ಳಬೇಕಾಗಿ ವಿನಂತಿ.

ಈ ಸಣ್ಣ ಪುಸ್ತಕದ ತುಂಬ ನನ್ನ ಪತ್ರಗಳೇ ತುಂಬಿದ್ದು, ನಾನು ಯಾರನ್ನು ಕಂಡು ಬರೆದೆನೋ, ಆಕೆಯ ಒಂದು ಪತ್ರವೂ ಪ್ರಕಟವಾಗದಿರುವುದು ಒಂದು ಕೊರತೆಯೆಂದು ಪುಸ್ತಕದ ಕೊನೆಯ ಪುಟಗಳು ಅಚ್ಚಾಗುವ ಹೊತ್ತಿಗೆ ಅನಿಸಿತು. ಆದ್ದರಿಂದ "ಪೂರ್ಣಿಮಾ" ಳ ಇತ್ತೀಚಿನ ಪತ್ರ ಒಂದನ್ನು ಇಲ್ಲಿ ಕೊಟ್ಟು, ಅದಕ್ಕೆ ಬರೆದಿರುವ ಉತ್ತರವನ್ನು ಪ್ರಕಟಿಸಿ ಈ ಪತ್ರ ಸಂಚಯದ ಪುಸ್ತಕವನ್ನು ಮುಗಿಸಿದ್ದೇನೆ.

"ಪೂರ್ಣಿಮೆ"ಗೆ ಹೇಳಿಕೊಳ್ಳುವಂತಹ ಒಂದೇ ಒಂದು ವೈಶಿಷ್ಟ್ಯವಿದೆ. ಅದೆಂದರೆ ಮುನ್ನುಡಿ. ಕನ್ನಡ ಸಾರಸ್ವತದಾಕಾಶದ ಧ್ರುವನಕ್ಷತ್ರವಾಗಿರುವ ರಾಜಸೇವಾಸಕ್ತ ಶ್ರೀ ಸಿ. ಕೇ. ವೆಂಕಟರಾಮಯ್ಯ, ಎಂ. ಎ. ಎಲ್.ಎಲ್. ಬಿ. ಇವರು ಮುನ್ನುಡಿ ಎಂದು ಬರೆದಿರುವುದು ಮುನ್ನುಡಿಯಲ್ಲ. ನನ್ನ ಮುನ್ನಡೆಗಾಗಿ ಅವರು ಇತ್ತ ಹರಕೆಯ ನುಡಿಗಳಿವು. ಮಣ್ಣಿನ ಮೂರ್ತಿಗೆ ಚಿನ್ನದ ಕಳಸವಿಟ್ಟು ಜೀವಕಳೆಯನ್ನು ತಂದುಕೊಟ್ಟಂತೆ, ಹಿರಿಯರೂ ಪೂಜ್ಯರೂ ಆದ ಶ್ರೀ. ಸಿ. ಕೇ. ವಿ. ಯವರು ಬಹು ಮಮತೆಯಿಂದ, ಸಂತೋಷವಾಗಿ ಈ ಪುಟ್ಟ "ಪೂರ್ಣಿಮಾ"ಳನ್ನು ಬೆನ್ನುತಟ್ಟಿ ತಲೆಯ ಮೇಲೆ ಕೈಯಿಟ್ಟು ಸಾಹಿತ್ಯಸೇವೆ ಸಲ್ಲಿಸೆಂದು ಆಜ್ಞೆ ಇತ್ತಿರುವರು.

ಶ್ರೀ ಸಿ. ಕೇ. ವಿ. ಯವರ ಈ ಉಪಕಾರವನ್ನು ಸ್ಮರಿಸಿಕೊಳ್ಳುವ ಈ ಸಮಯದಲ್ಲಿ ಹಿಂದಿನ ನೆನಹೊಂದನ್ನು ಹೇಳಿಕೊಳ್ಳದಿದ್ದರೆ ಮನಸ್ಸು ತಡೆಯುವುದಿಲ್ಲ. ನಾನು ಐದು ವರುಷಗಳ ಹಿಂದೊಮ್ಮೆ ಅಜ್ಞಾತಿಯಾಗಿ ದಿಕ್ಕುಗೆಟ್ಟು ದೆಸೆಗೆಟ್ಟು ಗತಿಗಾಣದೆ ಮತಿದೂರನಾಗಿ ಹಾಳುಹಂತೆಯಿಂದ

ಬೀಳುತೇಳುತ್ತ ಬಂದಾಗ ಹರಿಹರದಲ್ಲಿ ಇವರನ್ನು ಸಂಧಿಸಿದೆನು. ಹರಿಹರೇಶ್ವರಾಲಯುದಲ್ಲಿ ಅವರು ನನ್ನನ್ನು ನೋಡಿದಾಗ ಅವರು ಕರುಣೆಯ ಕಿರಣ, ಬೀರಿದರು. ಆಮೇಲೆ ಅವರು ದಾವಣಗೆರೆಯುವರೆಗೆ ತಮ್ಮ ಜತೆಯಿಲ್ಲಿ ಕುಳ್ಳಿರಿಸಿಕೊಂಡು ಮನದಡವಿ, ಮೈದಡವಿದರು. ನನಗೆ ಧೈರ್ಯಬರಲೆಂದು, ನಾನು ಹುರುಪುಗೊಳ್ಳಲೆಂದು, "ನಿನ್ನಲ್ಲಿ ಪ್ರತಿಭೆ ಇದೆ. ನೀನು ಎದೆಗುಂದಬೇಡ" ಎಂದು ರೈಲು ಸಿಳ್ಳುಹಾಕುತ್ತಿದ್ದರೂ ಗಟ್ಟಿಯಾಗಿ ಕೂಗಿ ಹೇಳಿದ ಅವರ ಅಪಾರ ಹರಕೆಯು ಬಲದಿಂವಲೇ ನಾನು ಈಗಲೂ ಬೆಳೆಯುತ್ತಿರುವೆನು. ಮತ್ತು ಈಗ ನಿಮ್ಮ ಮುಂದೆ ಬಂದಿರುವ "ಪೂರ್ಣಿಮಾ" ಬರೆಯುವ ಶಕ್ತಿಯೂ ಅವರ ಬಲವೇಯೆಂದಮೇಲೆ ಈ ನನ್ನ ಮೊದಲ ಪುಸ್ತಕಕ್ಕೆ ಅವರೇ ಮುನ್ನುಡಿ ಬರೆಯುವುದು ಅವರು ನನ್ನ ಮೇಲೆ ತೋರುವ ಮಮತೆಯ ಆಳವನ್ನು ಸೂಚಿಸುತ್ತದೆ. ಮುನ್ನುಡಿಯನ್ನು ಬರೆದುಕೊಟ್ಟ ಉಪಕಾರಸ್ಮರಣೆ ಪ್ರತ್ಯಕ್ಷವಾಗಿ ಮಾಡಬೇಕೇಕೆ, ನನ್ನ ಆಜೀವವೂ ನಾನು ಅವರಿಂದ ಉಪಕೃತವಾಗಿರುವಾಗ, ಅವರ ಉಪಕಾರ ಸ್ಮರಣೆಯೇ ನನ್ನ ಸ್ಮರಣಶಕ್ತಿಯ ತುಂಬ ತುಂಬಿರುವಾಗ ?

ಮಂಡೋದರಿ, ನಚಿಕೇತರನ್ನು ಸೃಷ್ಟಿಸಿದ ಕೈಯಿಂದ "ಪೂರ್ಣಿಮಾ" ಸ್ಪರ್ಶಿಸಲ್ಪಟ್ಟಿರುವಳು. ಸಹಜಗುಣವಾದ ಅನುಕಂಪ, ಸಹಾನುಭೂತಿ, ಮತ್ತು ವಾತ್ಸಲ್ಯ ಇವು ಬೆರೆತ ಶ್ರೀ. ಸಿ. ಕೇ. ವಿ. ಯವರ ಮನಸ್ಸು ಮತ್ತು ದೃಷ್ಟಿ "ಪೂರ್ಣಿಮಾ" ಪರಿಪೂರ್ಣಳಾದಳೇನೊ ಎಂಬ ನಂಬಿಕೆ ನನಗೆ ಬಂದಿರುವುದು.

ಹುಬ್ಬಳ್ಳಿ
೨೮–೧–೫೨

ಕನ್ನಡಿಗರೆಲ್ಲರಿಗೆ ಕಿರಿಯ,
**ತಿ. ಸಿದ್ದಪ್ಪ.**

---

# ಮುನ್ನುಡಿ

ತರುಣಸಾಹಿತಿಗಳಾದ ಶ್ರೀಮಾನ್ ತಿ. ಸಿದ್ದಪ್ಪನವರಿಂದ ರಚಿತವಾಗಿ, ಹುಬ್ಬಳ್ಳಿಯಲ್ಲಿ ಶ್ರೀಮಾನ್ ಪಿ. ವೆಂಕೋಬಾಚಾರ್ಯ, ಬಿ. ಏ., ಬಿ. ಟಿ., ಅವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿರುವ ಆನಂದ ಗ್ರಂಥಮಾಲೆಯ ಎರಡನೆಯ ವರುಷದ ನಾಲ್ಕನೇ ಕುಸುಮವಾಗಿರುವ ಈ "ಪೂರ್ಣಿಮಾ" ಎಂಬ ಗ್ರಂಥಕ್ಕೆ ಮುನ್ನುಡಿಯನ್ನು ಬರೆಯುವುದು ನನಗೆ ಸಂತೋಷಕರವಾಗಿದೆ. ಶ್ರೀಮಾನ್ ತಿ. ಸಿದ್ದಪ್ಪನವರು ನಿರುದ್ಯೋಗದ ತೊಂದರೆಗೆ ಸಿಕ್ಕಿದಾಗಿನಿಂದಲೂ ನಾನು ಅವರನ್ನು ಬಲ್ಲೆ. ಅವರಿಗೆ ಒದಗಿದ ಕಷ್ಟ ಪರಂಪರೆಗಳನ್ನೆಲ್ಲ ಅವರು ಧೈರ್ಯದಿಂದ ಎದುರಿಸಿದ ಎದೆಗಾರಿಕೆಗಾಗಿ ಅವರನ್ನು ನಾನು ಅಭಿನಂದಿಸುತ್ತೇನೆ. ಇನ್ನು ಮುಂದೆ ಅವರ ಸುಖ ಸಂತೋಷಗಳು ಅವಿಚ್ಛಿನ್ನವಾಗಿರಲೆಂದು ನಾನು ಮನಃಪೂರ್ವಕವಾಗಿ ಕೋರುತ್ತೇನೆ.

ಪತ್ರಿಕೋದ್ಯೋಗದಲ್ಲಿ ತೊಡಗಿರುವಾತನು ತನ್ನ ಪತ್ನಿ-ಪುತ್ರರಿಂದಲೂ ತನ್ನ ಪುತ್ರಿಯಿಂದಲೂ ಅನಿವಾರ್ಯವಾಗಿ ಅಗಲಿರಬೇಕಾದ ಮನೋವ್ಯಥೆಯಿಂದ ತೊಳಲಿ ತನ್ನ ಹೃದಯದ ಭಾವನೆಗಳನ್ನೆಲ್ಲ ತೋಡಿಕೊಂಡು ತನ್ನ ಪತ್ನಿ "ಪೂರ್ಣಿಮಾ" ಎಂಬಾಕೆಗೆ ಬರೆದ ಪ್ರಣಯ ಪತ್ರಗಳ ರೂಪದಲ್ಲಿ ಈ ಗ್ರಂಥವು ರಚಿತವಾಗಿದೆ. ಆತನ ಪತ್ರಗಳಲ್ಲಿ ಆಕೆಯಿಂದ ತನಗೆ ಬರುವ ಪ್ರತ್ಯುತ್ತರಗಳ ಪ್ರಸ್ತಾಪಗಳೂ ಇವೆ. ಇಪ್ಪತ್ತನೆಯ ಪತ್ರವು ಮಾತ್ರ ಆಕೆಯಿಂದ ಬಂದುದು; ಪ್ರಣಯಲೀಲೆಗಿಂತ ಕರ್ತವ್ಯ ನಿಷ್ಠೆಯು ಹೆಚ್ಚಿನದೆಂದು ಆ ಪತ್ರದಲ್ಲಿ ಆಕೆಯು ತನ್ನದೇ ಆದೊಂದು ರೀತಿಯಲ್ಲಿ ವಿವೇಕ ಬೋಧೆಮಾಡಿ ಗಂಡನಿಗೆ ಧೈರ್ಯ ಹೇಳಿ ಹುರಿದುಂಬಿಸುವ ರೀತಿಯು ಮನೋಜ್ಞವಾಗಿದೆ; ಆಕೆಯು ಆ ಪತ್ರದ ಕೊನೆಯಲ್ಲಿ "ಇತಿ ನಿಮ್ಮ ಚರಣದಾಸಿ ಪೂರ್ಣಿ" ಎಂದು ಬರೆದುಕೊಂಡಿದ್ದರೂ, ಆಕೆಯು ಆತನ ಜೀವನಕ್ಕೆ ಪೂರ್ಣಿಮಾಸ್ವರೂಪಿಣಿಯಾದ ಭಾಗ್ಯಲಕ್ಷ್ಮಿಯಂತಿರುವ ಸತೀಮಣಿಯೆಂದು ಸಂತೋಷವಾಗುವುದು.

ದಂಪತಿಗಳಿಬ್ಬರ ಹೃದಯಗಳಲ್ಲೂ ಪರಸ್ಪರ ಪ್ರೇಮವು ಹೊನಲಾಗಿ ಹರಿಯುತ್ತಿರುವುದು ಪ್ರತಿಯೊಂದು ಪತ್ರದಿಂದಲೂ ವ್ಯಕ್ತವಾಗುತ್ತದೆ. ಬಡತ

ನದ ಬವಣೆಯಾಗಲಿ, ಅಗಲಿಕೆಯ ವೇದನೆಯಾಗಲಿ, ಅವರ ಧೈರ್ಯ ಸ್ಥೈರ್ಯಗಳನ್ನು ಕುಗ್ಗಿಸುವುದಕ್ಕೆ ಪ್ರತಿಯಾಗಿ ಅವರ ಕಾರ್ಯಶ್ರದ್ಧೆಯನ್ನೂ ಅವರ ಪ್ರೇಮವನ್ನೂ ಹೆಚ್ಚಿಸುವ ಮನೋಹರ ದೃಶ್ಯವನ್ನು ಈ ಪತ್ರಗಳಲ್ಲಿ ಕಾಣಬಹುದು. ಪ್ರೇಮ ಪ್ರವಾಹದಲ್ಲಿ ತೇಲುತ್ತಿರುವ ಜೀವನ ನೌಕೆಯು ಹಠಾತ್ತಾಗಿ ಎದುರಿಗೆ ನಿಂತ ಸನತಿ ಮಾತ್ಸರ್ಯ ಸಂಭವದ ಬಂಪೆಗೆ ತಾಕಿ ನುಚ್ಚು ನೂರಾಗದೆ ಅದನ್ನು ಬಳಸಿಕೊಂಡು ಸಾವಧಾನವಾಗಿ ಮುಂದುವರಿಯುತ್ತದೆ. ದಂಪತಿಗಳಿಗೆ ಮಕ್ಕಳಲ್ಲೆಷ್ಟು ಪ್ರೀತಿ ವಾತ್ಸಲ್ಯಗಳು!

ಈ ಪುಸ್ತಕದಲ್ಲಿ ದಾಂಪತ್ಯ ಪ್ರೇಮ ಮಾಧುರ್ಯಗಳೊಡನೆ ಜೀವನದ ಕೆಲಕೆಲವು ಆಳವಾದ ಅನುಭವಗಳೂ ಸಮ್ಮಿಳಿತವಾಗಿರುವುದನ್ನು ಕಾಣಬಹುದು. ಇದು ಶ್ಲಾಘ್ಯವಾಗಿದೆ. ಶೈಲಿಯು ಸರಳ ಸುಂದರವಾಗಿ ಆಕರ್ಷಕವಾಗಿದೆ. ‘‘ಆದರೆ ರಸದಾಳೆಯ ಕಬ್ಬಿನಂತೆ ಬೆಳೆದು ನಿಂತ ಹುಡುಗಿ, ಲಾವಣ್ಯದ ಲಲ್ಲೆ ಗಲ್ಲದ ಮೇಲೆ ನಿಂತು ‘ನಾನಿಲ್ಲಿ’ ಎಂದು ಕೂಗಿ ಹೇಳುತ್ತಿರುವ ಅರಳುತ್ತಿರುವ ಆ ಮುಖ........” ‘‘ಸುಸಂಸ್ಕೃತೆಯಾದ ಸ್ತ್ರೀ, ದೇವರ ಹಣೆಯ ಮೇಲಿನ ತಿಲಕವಿದ್ದಂತೆ” ‘‘ಅಮ್ಮ ಏನು ಹೇಳಿ ಹೋದಳೆಂಬುದು ನಿನಗೆ ಗೊತ್ತಿದೆಯಲ್ಲವೆ? ‘ಬಡವನಾಗಿಯೇ ಕೊನೆಯವರೆಗೂ ನೀನಿರು ಮಗು. ಆಗ್ಲೇ ನಿಂಗೆ ಬಡವರನ್ನು ಕಂಡರೆ ಮರ್ಕಬರ್ತದೆ. ಇದೊಂದು ಗುಣಾನೇ ಸಾಕು. ದೇವರು ನಿನ್ನ ಕಾಪಾಡ್ತಾನೆ’ ಎಂದು ಹೇಳಿದ ತಾಯಿಯ ಮಾತು ನನಗೆ ವರಶಕ್ತಿಯಾಗಿದೆ”, ‘‘ಸುಖವನ್ನು ಸ್ವಾಗತಿಸುವ ಮುಗುಳು ನಗೆಯೇ ಕಷ್ಟವನ್ನು ಸ್ವಾಗತಿಸಲಿ. ಇದು ನನ್ನ ಜೀವನದ ಧರ್ಮ, ಹಾಗೂ ನನ್ನ ಕಾಯಕದ ಮರ್ಮ. ಇದನ್ನರಿತ ನೀನು ನನ್ನ ಜೀವನದ ಜೇನ ಹನಿಯಾಗಿ ಅನವರತ ಕಟ್ಟಾಗಿ ಮಧುರವಾಗು”; ‘‘ಬಸವನಾಳರು ಬಾಳಿದರು, ಬೆಳಗಿದರು, ಬೆಳಗಿಸಿದರು, ಇನ್ನೂ ಬೆಳಗಿಸುತ್ತಲೇ ಇರುವರು. ಇಂದು ಅಗಲಿಕೆಯ ಆವೇಶದಲ್ಲಿ ಬಸವನಾಳರ ಹೆಂಡತಿ ಮಕ್ಕಳು ಅಳುತ್ತಿದ್ದರೆ, ಈ ನೋವಿನ ಕಾವು ತೀರಿದ ಮೇಲೆ ಅವರು ಇಹಲೋಕದಲ್ಲಿ ಉಳಿಸಿ ಹೋದ ಕೀರ್ತಿಯ ಪಾರಿಜಾತದ ಗಿಡವು ತೀಡುವ ತಿಳಿಗಾಳಿಯ ಗಂಧ ಇವರೆಲ್ಲರಿಗೂ ಸಮಾಧಾನವನ್ನುಂಟುಮಾಡುವುದು”, ‘‘ಇದು ಬುದ್ಧಿವಾದವಲ್ಲ, ಧೈರ್ಯ ಸಂಜೀವಿನಿ”;

"ಕರ್ನಾಟಕದಲ್ಲಿ ಕಾಂಗ್ರೆಸ್ಸು ಜಯಭೇರಿಯನ್ನು ಹೊಡೆಯಿತು" ಮುಂತಾದ ಮನೋಹರವಾದ ವಾಕ್ಯಗಳನ್ನು ಈ ಗ್ರಂಥದಲ್ಲಿ ಕಾಣಬಹುದು; ಅನೇಕ ವಾಕ್ಯಗಳು ಅರಳುಮಲ್ಲಿಗೆಯಂತೆ ನಮ್ಮ ಮನಸ್ಸನ್ನು ಆಹ್ಲಾದಗೊಳಿಸುತ್ತವೆ. ಗ್ರಂಥಕರ್ತರಿಗೆ ಉತ್ತಮ ಭವಿಷ್ಯವಿದೆಯೆಂದು ಧಾರಳವಾಗಿ ಹೇಳಬಹುದು.

ಶ್ರೀಮಾನ್ ತಿ. ಸಿದ್ದಪ್ಪನವರು ಈ ಗ್ರಂಥವನ್ನು ಬರೆದು ಶ್ಲಾಘ್ಯ ರೀತಿಯಲ್ಲಿ ಕನ್ನಡ ಸಾಹಿತ್ಯಕ್ಕೆ ಸೇವೆ ಸಲ್ಲಿಸಿದ್ದಾರೆ. ಸಹೃದಯರಾದ ಮತ್ತು ನುರಿತ ಸಾಹಿತಿಗಳಾದ ಶ್ರೀಮಾನ್ ವೆಂಕೋಬಾಚಾರ್ಯರವರವರು ಅದನ್ನು ತಮ್ಮ ಆನಂದ ಗ್ರಂಥಮಾಲೆಯಲ್ಲಿ ಪ್ರಕಟಿಸಿದ್ದಾರೆ. ಈ ಗ್ರಂಥಕ್ಕೆ ನಮ್ಮ ಕನ್ನಡ ಬಾಂಧವರಿಂದ ಹೆಚ್ಚಾಗಿ ಪ್ರೋತ್ಸಾಹ ದೊರೆತು, ಶ್ರೀಮಾನ್ ಸಿದ್ದಪ್ಪನವರಿಂದ ಚಿರಕಾಲ ಸಾಹಿತ್ಯ ಸೇವೆಯು ನಡೆಯುವಂತಾಗಲೆಂದು ನಾನು ಮನಃಪೂರ್ವಕವಾಗಿ ಹಾರೈಸುತ್ತೇನೆ.

ಬೆಂಗಳೂರು
ತಾರೀಖು; ೨೮—೧—೧೯೩೨

**ಸಿ. ಕೆ. ವೆಂಕಟರಾಮಯ್ಯ**

## ಸಂಪಾದಕರ ಮಾತು

"ಪೂರ್ಣಿಮಾ" ಕನ್ನಡ ಸ್ವತಂತ್ರ ಪತ್ರಸಾಹಿತ್ಯದಲ್ಲಿ ಹೊಸರೀತಿಯದು. ಶ್ರೀಯುತ ತಿ. ಸಿದ್ದಪ್ಪನವರನ್ನು ಹುಬ್ಬಳ್ಳಿಯ "ನವಯುಗ"ದ ಲೇಖಗಳಿಂದ ಅರಿತಿದ್ದೆ. ಕ್ರಮೇಣ ಅವರ ಪ್ರತ್ಯಕ್ಷಪರಿಚಯವಾಯಿತು. ಕೇವಲ ಪತ್ರಿಕೋದ್ಯಮಿಯಾಗಿರದೇ, ಅವರು ಸಾಹಿತಿಗಳಾಗಿದ್ದು, ಮುಂದೆಯೂ ಆಗಬಲ್ಲರೆಂಬ ನಂಬಿಕೆ ನನ್ನದಾಗಿತ್ತು. ಅವರಲ್ಲಿ ಕಲಾವಿದನ ಲಕ್ಷಣಗಳಿರುವುದೆಂಬುದನ್ನೂ ಅರಿತೆ. ಅವರು ನನ್ನ ಆತ್ಮೀಯ ಗೆಳೆಯರಾದರು. ಅಂದು ಗುರುವಾರ, ಶ್ರೀ ರಾಘವೇಂದ್ರರಾಯರ ದಿನ. ತಾವು ಅರ್ಧ ಬರೆದಿದ್ದ ಪೂರ್ಣಿಮೆಯನ್ನು ಓದಿದರು. "ಶ್ರೀ ಗುರುರಾಯರ ಪ್ರೇರಣೆಯಿಂದ ಬರೆದ ಈ ಪುಸ್ತಕವನ್ನು ಪೂರ್ತಿಮಾಡಿ, ನಮ್ಮ ಮಾಲೆಯಲ್ಲಿ

ಅದನ್ನು ಪ್ರಕಟಿಸಲು ಅನುವು ಮಾಡಿಕೊಡಿ" ಎಂದು ಕೇಳಿಕೊಂಡೆ. ಇಂತು ಈ ಪುಸ್ತಕ ಅರ್ಧವಾಗಿದ್ದುದು ಪೂರ್ತಿಗೊಳ್ಳಲು ಪುಸ್ತಕರೂಪದಲ್ಲಿ ಹೊರ ಬರಲು ಮಂತ್ರಾಲಯದ ಆ ಗುರುಗಳೇ ಕಾರಣರೆಂದು ನಮ್ಮೀರ್ವರ ನಂಬಿಕೆ. ಅವರ ಆಶೀರ್ವಾದ ಬಲವೇ ನಮ್ಮನ್ನು ಮುಂದೂಡುತ್ತಿದೆ. ಅವರ ಚರಣಕಮಲದಲ್ಲಿ ಈ ಪುಸ್ತಕವನ್ನು ಸಮರ್ಪಿಸುತ್ತಲಿದ್ದೇನೆ.

''ಪೂರ್ಣಿಮಾ" ಪ್ರೇಮುಕಾಮುದ ಪತ್ರಗಳಲ್ಲ. ದಂಪತಿಗಳಿಗೆ ಆದರ್ಶವಾಗಿರುವ ಅನೇಕ ವಿಷಯಗಳನ್ನೊಳಗೊಂಡಿದೆ. ಕಾಲ್ಪನಿಕ ವಿಷಯಗಳಿಗಾಗಲಿ, ಊಹೆ ಉತ್ಪ್ರೇಕ್ಷೆಗಳಿಗಾಗಲಿ ಇದರಲ್ಲಿ ಸ್ಥಾನವಿಲ್ಲ. ಲೇಖಕರು ತಮ್ಮ ಜೀವನದ ಮಧುರ ಅನುಭವಗಳನ್ನು, ಕಷ್ಟಪರಂಪರೆಯ ಸನ್ನಿವೇಶಗಳನ್ನು ಆಯ್ದುಕೊಂಡು ಓದುಗರಿಗೆ ಆದರ್ಶ ಸಾಹಿತ್ಯವನ್ನೊದಗಿಸಿರುವರು. ಶ್ರೀ ತಿ. ಸಿದ್ದಪ್ಪನವರ ನೆರವು ಘನವಾದುದು. ಅವರಿಗೆ ಅನಂತವಂದನೆಗಳು.

ಈ ಪುಸ್ತಕಕ್ಕೆ ಅನುಭವಪೂರ್ಣ ಮುನ್ನುಡಿಯನ್ನು ಬರೆದು ರಾಜಸೇವಾಸಕ್ತ ಶ್ರೀ ಸಿ. ಕೇ. ವೆಂಕಟರಾಮಯ್ಯ. ಎಂ. ಎ , ಎಲ್. ಎಲ್. ಬಿ. ಇವರು ಈ ಪುಸ್ತಕದ, ಮತ್ತು ನಮ್ಮ ಗ್ರಂಥಮಾಲೆಯ ಹಿರಿಮೆಯನ್ನು ಹೆಚ್ಚಿಸಿರುವರು. ಈ ವಿದ್ವತ್ಪೂರ್ಣ ಮುನ್ನುಡಿಯಲ್ಲಿ ಅವರ ಅನೇಕ ದಾರಿ—ಮಾತುಗಳಿವೆ. ತರುಣ ಲೇಖಕರಿಗೆ ಅವರು ನೀಡುವ ಆಸರವೇ ಅವರ ಅಂತಃಕರಣ ಹೃದಯವೆಂತಹುದೆಂಬುದನ್ನು ವ್ಯಕ್ತಗೊಳಿಸುತ್ತದೆ. ಶ್ರೀ ಸಿ. ಕೆ. ವಿ. ಯವರಿಗೆ ನಾವು ಚಿರಋಣಿಗಳು.

ಇದು ನಮ್ಮ ಮಾಲೆಯ ಎರಡನೆಯ ವರುಷದ ಕೊನೆಯ ಕುಸುಮ. ಉದಾರ ಹೃದಯದಿಂದ ನೆರವಾದ ಎಲ್ಲರಿಗೂ ನಮ್ಮ ನಮಸ್ಕಾರಗಳು. ಈ ಪುಸ್ತಕವು ತಡವಾಗಿ ಹೊರಬಂದುದಕ್ಕೆ ಸಹೃದಯರು ಕ್ಷಮಿಸುವರೆಂದು ಕೋರುತ್ತೇವೆ.

ಈ ಪುಸ್ತಕವನ್ನು ತಮ್ಮ ಸುಧಾ ಪ್ರೆಸ್‌ದಲ್ಲಿ ಮುದ್ರಿಸಿ ಸಹಕರಿಸಿದ ಶ್ರೀ ಕೆ. ಜಿ. ತಾಪಸ, ಬಿ. ಎ., ಇವರಿಗೆ ನಾವು ಋಣಿಗಳಾಗಿದ್ದೇವೆ.

ಹುಬ್ಬಳ್ಳಿ<br>೧—೨—೪೨

ಪಿ. ವೆಂಕೋಬಾಚಾರ್ಯ<br>ಸಂಪಾದಕ: ಆನಂದ ಗ್ರಂಥಮಾಲಾ, ಹುಬ್ಬಳ್ಳಿ.

# ಪೂರ್ಣಿಮಾ

## [೧]

**ಪ್ರಿಯೆ ಪೂರ್ಣಿಮಾ,**

ಇಂದು ಮನೆಗೆ ಬಂದಾಗ ೨-೩೦. ಮಧ್ಯರಾತ್ರಿ ಮೀರಿತ್ತು. ಮನೆಯ ದಾರಿಯಲ್ಲಿ ಮಲಗಿದ್ದ ನಾಯಿಗಳು ಬೊಗುಳಿ ನನ್ನ ಸ್ಥಿತಿಯನ್ನು ತೆಗಳುತ್ತಿದ್ದವು. ಮನೆಯ ಮೌನ, ಆದರ ಕಳಾ ಶೂನ್ಯತೆ ಇವು ನನ್ನನ್ನು ಬೆನ್ನು ಹಿಡಿದು ಹಿಂದಕ್ಕೆ ನೂಕುತ್ತಿದ್ದವು. ನಾನು ಅವುಗಳನ್ನು ನೂಕಿಕೊಂಡು ಮನೆಯನ್ನು ಹೊಕ್ಕೆನು.

ಬಂದವನೇ ಹಾಸಿಗೆಯನ್ನು ಆಶ್ರಯಿಸಿದೆನು. ಅದಾದರೂ ಕರುಣೆಯನ್ನು ತೋರುವುದೆಂದು ಆಶಿಸಿದೆನು. ಇಲ್ಲ—ಅದೂ ನಿರ್ದಯವಾಗಿತ್ತು. ನಿದ್ರೆಕೊಡಲಿಲ್ಲ. ನಾಲ್ಕು ಬಡೆಯಲು ಹತ್ತು ನಿಮಿಷಗಳಾದರೂ ಕಣ್ಣನ್ನು ಭದ್ರವಾಗಿ ಮುಚ್ಚಿಕೊಂಡರೂ ಮಪ್ಪರವೂ ಬರಲಿಲ್ಲ.

ಇಂದು ಒಂದು ರಾತ್ರಿಯೇಕೆ ಪ್ರತಿ ರಾತ್ರಿಯೂ ಇಂತೆಯೇ ಆಗುತ್ತಿದೆ. ನಿನ್ನನ್ನು ನನ್ನ ಮನಸ್ಸಿನ ವಿರುದ್ಧವಾಗಿ ಅನಿವಾರ್ಯವಾಗಿ ಎಳೆದುಕೊಂಡು ಹೋಗಿ ಅಲ್ಲಿಗೆ ಬಿಟ್ಟು ಇಲ್ಲಿಗೆ ಬಂದಾಗಿನಿಂದಲೂ ಇದೇ ಪ್ರಾಯಶ್ಚಿತ್ತ. ಮುಂಜಾನೆ ೧೦ ಘಂಟೆಗೆ ಮನೆಯನ್ನು ಬಿಟ್ಟರೆ ಪುನಃ ಮನೆಗೆ ಬರುವುದು ರಾತ್ರಿ ಎರಡು ಘಂಟೆಗೆ. ನೀನಿಲ್ಲದ ಮನೆ; ಮಕ್ಕಳಿಲ್ಲದ ಮನೆ ನಿಜವಾಗಿ ನಾನು ಈ ಮನೆಗೆ ಇಟ್ಟ ಹೆಸರಿನಂತೆ "ಬೇವಿನ ಮನೆ" (Neem cottage) ಯಾಗಿಯೇ ಇದೆ.

ಎಲ್ಲಕ್ಕಿಂತ ಇಂದಿನ ರಾತ್ರಿ ತೀರ ಹಗಲಾಗಿ ಬಿಟ್ಟಿತು. ಮಲಗುವುದು ಬೇಡವಾಯಿತು. ಎದ್ದು ಕುಳಿತೆನು. ದಿಂಬನ್ನು ಒರಗಿಕೊಂಡೆ. ಒಮ್ಮೆಲೇ ನನ್ನ ನೆನಪಿನ ತೆರೆಯು ತೆರೆಯಿತು. ಮಂಚದಿಂದ ಇಳಿದು ಬಂದು—ಆ ನೆನಪಿನ ಒತ್ತಡದಲ್ಲಿ ಲೇಖನಿಯನ್ನು ಹಿಡಿದು ಕುಳಿತಿರುವೆನು.

ಏನನ್ನು ಬರಸುವುದೋ ಬರೆಸಲಿ ಎಂದು ತೆರೆದ ಹೃದಯದಿಂದ ಉಕ್ಕಿ ಬಂದ ಭಾವನೆಗಳ ಬಡಿತದಿಂದ ಸಿದ್ಧನಾಗಿರುವೆನು.

ಪೂರ್ಣೀ, ನನ್ನ ಜೀವನವನ್ನು ಪ್ರಯೋಗ ಶಾಲೆಯೆಂಬ ಒಳ್ಳೆಯ ಹೆಸರಿನಿಂದ ಕರೆದುಕೊಳ್ಳುವುದಕ್ಕಿಂತ, ಪ್ರಾಯಶ್ಚಿತ್ತದ ಮಂಟಪವೆಂದು ಕರೆದುಕೊಳ್ಳುವುದು ಸರಿಯಾದೀತು. ಬಾಲ್ಯ, ಯೌವನ, ವೃದ್ಧಾಪ್ಯ, ಬಡತನ, ಸಿರಿತನ, ಸೊಬಗು, ಬೆಡಗು, ಇವೆಲ್ಲವನ್ನೂ ನಲವತ್ತು ವರುಷ ತುಂಬುವುದರಲ್ಲೇ ನುಂಗಿ ನೀರು ಕುಡಿದಿರುವ ನನಗೆ, ಜೀವನ ಬೇಸರವಾಗಿ, ಮರಣವು ಆಪ್ಯಾಯನವಾಗಿದ್ದರೆ ಆಶ್ಚರ್ಯವೇಕೆ? ನೀನು ನಮಗಾಗಿ ಬದುಕಿರಿ ಎಂದೇನೋ ಹೇಳುತ್ತಿರುವಿ ನಿಜ, ನಿನಗಾಗಿ ನಾನು, ನನಗಾಗಿ ನೀನು, ನಾನು ಮತ್ತು ನೀನೂ, ಇಬ್ಬರೂ ಮಕ್ಕಳಿಗಾಗಿ ಬದುಕುವುದು ಬದುಕಬೇಕಾದುದು ಸಹಜವೇ ಆದರೂ ನನಗೇಕೆ ಜೀವಿಸಿರಬೇಕೆಂಬ ಬಯಕೆಯೇ ಹುಟ್ಟುತ್ತಿಲ್ಲವಲ್ಲ? ಕಷ್ಟಗಳಿಗೆ ಹೆದರುವ ಹೇಡಿತನವಿಲ್ಲದಿದ್ದರೂ, ಶಿಕ್ಷೆಗಳಿಗೆ ಬೆದರದ ಎದೆತನವಿದ್ದರೂ, ಈ ಲೋಕವನ್ನು ಕಂಡರೆ ಇಷ್ಟೊಂದು ವ್ಯಾಕುಲವೇಕೆ?

ನನ್ನನ್ನು ಆಡಿಸುವ ವಿಧಿ, ಬರಿಯ ಬಡತನವನ್ನು ಕೊಟ್ಟರೆ ಬೇಡವೆನ್ನುವರಾರು? ಅದರ ಜೊತೆಗೆ ಅಗಲಿಕೆಯನ್ನೂ ಜೋಡಿಸುವನೇಕೆ? ಹೀಗೆಂದ ಕೂಡಲೇ ಕಾಮ ಜೀವನದ---ಕಾತುರವೆಂದರ್ಥ ಮಾಡುವರು ಮಾಡಿಕೊಳ್ಳಲಿ. ಅವರಿಗೇನು ಗೊತ್ತು, ಪ್ರೇಮದ ಗಾಳಿಯು ತಿಳಿ ಹೃದಯಗಳಲ್ಲಿ ತೀಡುವ ತಂಗಾಳಿಯ ಸೊಗಸು!

ಮದುವೆಯಾಗಿ ಇಂದಿಗೆ ೧೫ ವರುಷಗಳು ಕಳೆದವು. ನೀನು ನಾಲ್ಕು ಮಕ್ಕಳ ತಾಯಿ, ಅಂದಮೇಲೆ ನಾನೂ ನಾಲ್ಕು ಮಕ್ಕಳಿಗೆ ತಂದೆಯಾದೆನಲ್ಲವೆ? ಅನುಭವಿಸಿದ ಕಷ್ಟ ನಿಷ್ಠುರಗಳ ನೆನಪು ಬಂದರೆ ಭಯವಾಗುವುದಿಲ್ಲ. ಬಡತನದ ಭೂತವು ನಾಲ್ಕು ಕೋರೆಗಳನ್ನು ಕಟ್ಟಿಕೊಂಡು ಬಂದರೂ ಅದನ್ನು ದಿಟ್ಟಿಸಿ ನೋಡುವ ದಿಟ್ಟತನವಿದೆ. ಆದರೆ ಬಲವಂತವಾಗಿ, ಇರಬೇಕಾದ ಈ ಅಗಲಿಕೆಯು ನನಗೆ ಶೂಲಕ್ಕೇರಿಸಿದಂತಾಗಿದೆ.

ಜೊತೆಯಲ್ಲಿ ಜೀವಿಸಿರಬೇಕಾದರೆ ಇದೋ ಗುಟುಕುಗಂಜಿ! ಅಗಲಿರಬೇಕಾದರೆ, ಹಿಡಿ, ಹಿಡಿಯನ್ನವನ್ನು ಎಂದು ವಿಧಿ ನನ್ನೊಂದಿಗೆ ಚಕ್ಕಂದವಾಡುತ್ತಿರುವನು. ಯಾವುದನ್ನು ಸ್ವೀಕರಿಸಲಿ ಪೂರ್ಣಿಮಾ ? ಈ ಆಯ್ಕೆಯಲ್ಲಿ ನಿನ್ನದೂ ಪಾತ್ರವಿದೆ. ನಿನಗಾವುದು ಬೇಕೆಂಬುದನ್ನು ತಿಳಿದುಕೊಂಡೇ ನಾನು ಆರಿಸಿಕೊಳ್ಳಬೇಕಾಗಿದೆ. ನಾವೆಲ್ಲ ಕೂಡಿದ್ದು ನೀನು ಮಕ್ಕಳೂ ಅರೆಹೊಟ್ಟೆ ಇರಬಲ್ಲಿರೋ, ಅಥವಾ ನನ್ನಿಂದ ದೂರವಿದ್ದು ಹೊಟ್ಟೆ ತುಂಬಿಸಿಕೊಳ್ಳುವಿರೋ. ಗೊತ್ತಿದೆ ಪೂರ್ಣಿಮಾ, ನಿನ್ನ ಹೃದಯವೂ ನನಗೆ ಗೊತ್ತಿದೆ. ನಿನ್ನ ಬಯಕೆಯೂ ತಿಳಿದಿದೆ; ನಿನಗೆ ನಾನು ಬೇಕು. ಮತ್ತು ಹೊಟ್ಟೆ ತುಂಬುವಷ್ಟು ಅನ್ನ ಮೈದುಂಬುವಷ್ಟು ಅರಿವೆ ಬೇಕು. ಪಾಪ, ಇದೇನು ನೀನು ಬೇಡಬಾರದ ಆಸೆಯೆ ? ಇರಬಾರದ ಇಚ್ಛೆಯೇ ? ಆದರೆ ನನ್ನ ವಿಧಿಯ ಇಚ್ಛೆಯೇ ಬೇರೆಯಾಗಿರುವಾಗ, ಅವನಿಗೆದುರು ಗೊಣಗೊಟ್ಟಲು ನಾವೆಷ್ಟರವರು.

ನನ್ನ ಎದೆಯೊಡತಿ, ನಾನು ನಿಶ್ಚಯಿಸಿರುವೆನು ಎಲ್ಲವನ್ನೂ ಮರೆತು: ಎಲ್ಲರನ್ನೂ ಬಿಟ್ಟು ಬರಿಯ ದುಡಿತವನ್ನೇ ಶರಣುಹೋಗಬೇಕೆಂದು. ದುಡಿತದಲ್ಲಿ ಬಳಲಿಕೆ ಕಂಡರೂ, ಬವಣೆಯ ಭಯವು ಕಾಣುತ್ತಿಲ್ಲ. ನಾಳೆ ನನ್ನ ಮಕ್ಕಳಿಗೆ ಏನು ಗತಿ ಈ ದುರ್ಭಿಕ್ಷದಲ್ಲಿ ಎಂಬ ಕಳವಳವನ್ನು ನನ್ನಿಂದ ದೂರಾಗಿಸುವ ಈ ನನ್ನ ಕೆಲಸವೇ ನನಗೆ ಬೆಳದಿಂಗಳ ಜೊತೆಗಾತಿ. ಮಲಗುವಾಗ ಏಳುವಾಗ ಸಣ್ಣ ದನಿಯಲ್ಲಿ ಕಣ್ಣುಕುಣಿಸುತ್ತ ಇನ್ನು ಮಲಗಿರಿ, ಇನ್ನು ಏಳಿರಿ, ಎಂದು ವೈಯಾರದಿಂದ ಸಂಧ್ಯಾರಾಗ. ಉದಯರಾಗಗಳನ್ನು ಹಾಡುವ ನನ್ನ ಎಡಬಲದ ವೈಯಾರಿ ಈ ನನ್ನ ಹಗಲು ರಾತ್ರಿಯ ಕೆಲಸವೇ ಆಗಿದೆ.

ನನ್ನ ಕೆಲಸ, ನನ್ನ ದುಡಿತ, ನನ್ನ ಕಸುಬು ಇವು ನಿನಗೆ ಸವತಿ ತಿಳಿಯಿತೆ ? ಸರಿಯಾದ ಹೋಲಿಕೆಯನ್ನು ಕೊಟ್ಟಂತಾಯಿತಲ್ಲವೆ ಲೋಕದವರ ಕಡೆಗೆ ಕೈ ತೋರಿಸಬೇಡ. ಅವರಂತೆ ಪಾಪ-ಶಾಪಗಳಿಗೆ ಪುರೋಹಿತರಿಗೆ ದಕ್ಷಿಣೆ ಕೊಟ್ಟು ಅವರಿಂದ ಪುಣ್ಯಾರ್ಚನೆ ಮಾಡಿಸಿ ಪರಿಶುದ್ಧಿಗೊಳಿಸುವ ಶಕ್ತಿ ಅಥವಾ ಯುಕ್ತಿ ನನ್ನಲ್ಲಿ ಇಲ್ಲ. ದಕ್ಷಿಣೆಯ ಬಲವೂ

ಇಲ್ಲ! ಪುರೋಹಿತರ ಒಲವೂ ಇಲ್ಲ. ನನಗಿರುವುದು ನಿನ್ನ ಮತ್ತು ನಿನ್ನ ಸವತಿಯ ಒಲವು. ಕೂಡಲೇ ಉತ್ತರ ಬರೆಯುವೆಯಲ್ಲವೆ.

ಹೂಬಳ್ಳಿ ಇತಿ ನಿನ್ನ ಚೆನ್ನ.

x x x

[೨]

ಹೃದಯೇಶ್ವರಿ.

ಏಕಾಕಿಯಾಗಿರುವೆ, ಹೆದರಬೇಡ, ಧೈರ್ಯವಾಗಿರು ಎಂದು ಒಂದು ಮಾತನ್ನೂ ನಿನಗೆ ಬರೆಯದೆ ನಾನು ಮತ್ತು ನನ್ನ ಕೆಲಸ ಇಷ್ಟನ್ನೇ ಕುರಿತು ಬರೆಯುತ್ತಿದ್ದರೆ ನಿನಗೆ ಕೋಪ ಬಂದಿರಬಹುದು ಆದರಿಂದಲೆ ಒಂದು ವಾರವಾಗಿದ್ದರೂ ನೀನು ಪತ್ರವನ್ನೇ ಬರೆದಿರುವುದಿಲ್ಲ.

ಇಲ್ಲ, ನಿನಗೆ ಕೋಪ ಬರುವುದಿಲ್ಲ. ನನ್ನನ್ನು ಬಲ್ಲೆ ನೀನು. ಹದಿನೈದು ವರುಷಗಳಲ್ಲಿ ಕಳೆದ ಅಗಲಿಕೆಯ ಮೂರು ನಾಲ್ಕು ವರುಷಗಳನ್ನು ಬಿಟ್ಟರೂ ಹನ್ನೆರಡು ವರುಷ, ನನ್ನ ನೆರಳಾಗಿ ನಿಂತು, ನನ್ನ ಬೆಳಕಾಗಿ ಬೆಳಗಿದ ನೀನು, ನನ್ನ ಬಗ್ಗೆ ಎಂದೂ ಸಿಟ್ಟು ಮಾಡಿಕೊಳ್ಳಲಾರೆ. ಸಿಟ್ಟು ಬಂದರೂ ಅದು ಬಹು ಸಿಹಿಯ ಸಿಟ್ಟು. ಹೌದು ನೆನಪಿಗೆ ಬಂತು. ಒಂದು ಸಾರಿ ಮಾತ್ರ ಅರ್ಥವೇಕೆ ಅನರ್ಥವನ್ನೇ ಮಾಡಿಕೊಂಡಿದ್ದೆ. ನೆನಪಿದೆಯೆ? ಅಂದು ನಿನ್ನ ಸ್ನೇಹಿತೆ ಆ ಮದುವೆಯಾಗದ, ಬಲಿತ ಕನ್ಯೆ, ಚಪಲತೆಯನ್ನೇ ಚಪ್ಪರಿಸುತ್ತಿದ್ದ ಆ ಚಪಲಾಕ್ಷಿ ನನ್ನನ್ನು ನೋಡಿ ಚಲಿತಳಾದಳೆಂದೋ, ಅಥವಾ ಆಕೆಯನ್ನು ನಾನು ಕಣ್ಣುಬಿಟ್ಟು ನೋಡಿದನೆಂಬ ಆರೋಪದ ಮೇಲೂ, ಗಂಟುಮೂಟೆ ಕಟ್ಟಿ ಗಂಟುಮುಖ ಹಾಕಿಕೊಂಡು ಕುಳಿತುಕೊಂಡಿದ್ದೆಯಲ್ಲಾ ನನ್ನ ನಿಮ್ಮ ನೆಂಟು ಹರಿಯಿತೆಂದು. ತುಂಟ ರೋದನವನ್ನು ಮಾಡಿ ಗಂಟಲು ಗೀಚಿಕೊಂಡೆ, ಜ್ಞಾಪಕವಾಯಿತೇನು ?

ಈಗ ಅದನ್ನೆಲ್ಲಾ ನೆನಸಿಕೊಂಡರೆ, ನಿನಗೇ ನಗು ಬರುವುದಲ್ಲವೆ. ಅಲ್ಲವೇ ಪೂರ್ಣಿ, ನೀನೇ ನಿನ್ನ ಸ್ನೇಹಿತೆಯೆಂದು ಮನೆಗೆ ಕರೆದುಕೊಂಡು ಬಂದೆ. ಬಹು ಸುಸಂಸ್ಕೃತೆ ಎಂದು ಗುರುತು ಮಾಡಿಸಿದೆ. ನನ್ನಲ್ಲಿ ಆಕೆಗೆ ಅಣ್ಣನಿಗಿಂತ ಹೆಚ್ಚಾದ ಪೂಜನೀಯ ಭಾವನೆಯಿದೆಯೆಂದು ನೀನೇ ಬಡಾಯಿ ಕೊಚ್ಚಿಕೊಂಡೆ. ಆದರೇ ಕೊನೆಗೆ ಪಾಪ, ಧೈರ್ಯವಾಗಿ ನನ್ನ ಕಡೆಗೆ ನೋಡುತ್ತಲಿದ್ದ ಅದು ನಿನ್ನೆದುರಿನಲ್ಲೇ ಭಯ ಇಲ್ಲದೆ ಮಾತನಾಡಿ ಸುತ್ತಿದ್ದ ಆ ಮಲೆನಾಡ ಹುಡುಗಿಯನ್ನು, ಒಂದೇ ನಿಮಿಷದಲ್ಲಿ ಎಂತಹ ದೂರಿಗೆ ಗುರಿಮಾಡಿದೆ. ನನ್ನ ಕಡೆಗೆ ಉರಿಗಣ್ಣನ್ನು ಬಿಟ್ಟೆ. ಒಂದು ದಿನ ಉಪವಾಸ ಮಾಡಿದ ನಂತರ, ಕಣ್ಣೀರು ಹರಿದು ಹರಿದು ಕೆನ್ನೆಗೆ ಶೀತ ವಾದ ಮೇಲೆ, ನನ್ನ ಭಾವಚಿತ್ರವನ್ನು ವೊಗಚಿದ ಮೇಲೆ, ನನಗೊಂದು ಸಾರಿ, ಮುಳ್ಳಕ್ಕಿಯ ಅನ್ನವನ್ನು ಹಾಕಿ ಒಂದು ದಿನ ವಯಸ್ಸಾದ ಹುಳಿ ಯನ್ನು ಹಾಕಿದ ಮೇಲೆ, ನಿನ್ನ ಕೋಪ ಶಾಂತವಾಯಿತು! ಆಗ ನಾನು ಬಹಳ ಸಹಿಸಿಕೊಂಡೆನಲ್ಲವೆ? ಇಲ್ಲದಿದ್ದರೆ ತಪ್ಪಾಯಿತೆಂದು ನೀನು ಸುಲಭ ವಾಗಿ ಅನ್ನುತ್ತಿದ್ದೆಯೇನು!

ಮತ್ತೆ ಅಂತಹ ಪ್ರಸಂಗ ಬಂದಿಲ್ಲ. ಸದ್ಯ ಬರದಿರಲಿ.

ತಾಳು–ಅದೇನೋ ಹೊರಗಡೆ, ಚೀರಾಟ ಕೂಗಾಟ ಕೇಳಿ ಬರುತ್ತಿದೆ ........ಹೋಗಿ ನೋಡಿಬಂದೆನು. ಹತ್ತು ನಿಮಿಷಗಳ ದೃಶ್ಯವದು. ನೀನೂ ನೋಡುವಂತಹದಿತ್ತು. ನಾನಿರುವ ಪಕ್ಕದ ಮನೆಯ ಪಕ್ಕದಲ್ಲಿ ಒಂದು ಮನೆ ಇರುವುದಷ್ಟೆ. ಬೀಡಿ ಸಿಗರೇಟು ಬೀಡಾ ಅಂಗಡಿಯನ್ನು ಗಂಡಹೆಂಡಿರಿಬ್ಬರೂ ಸೇರಿ ನಡೆಸುತ್ತಿರುವರು. ಗಂಡನಿಗೆ ಒಂದು ಕಾಲು ಮಾತ್ರವಿಲ್ಲ. ಹೆಂಡತಿಗೆ ಕೈಕಾಲು, ಬಾಯಿ, ಎಲ್ಲವೂ ಸರಿಯಾಗಿದೆ. ಗಂಡನಷ್ಟೆ ಎತ್ತರ. ವಯಸ್ಸು ಮೀರಿದ್ದರೂ ಪ್ರಾಯವಾರದಿರುವ ದಿಟ್ಟತನ. ಸೌಂದ ರ್ಯದ ಹೆಸರೆತ್ತದಿರುವುದೇ ಸರಿ. ನಾನು ಪ್ರತಿದಿನವೂ ಅಂಗಡಿಯ ಮುಂದೆ ಹಾಯುವಾಗ ಇವರಿಬ್ಬರೂ ಎಲೆಯಡಿಕೆ ಜಗಿಯು ತ್ತಿದ್ದು ಸಾಲ ಸೋಲಗಳ, ವ್ಯಾಪಾರ ವ್ಯವಹಾರಗಳ ಮಾತುಕತೆಯನ್ನಾ ಡುತ್ತಿದ್ದುದನ್ನು ಕೇಳುತ್ತಲೇ ಇದ್ದೆನು. ಆದರೆ ಇಂದು ಕೇಳಿದುದೇ ಬೇರೆ.

ನೋಡಿದುದೇ ಬೇರೆ. ಅವರಿಬ್ಬರ ನಡುವೆ ನಡೆದ ವಾಗ್ಯುದ್ಧಕ್ಕಿಂತ ಮಲ್ಲಯುದ್ಧವೇ ಚೆನ್ನಾಗಿತ್ತು. ಕಾಲಿಲ್ಲದ ಗಂಡ ಕಾಳಿಯಂತಹ ಹೆಂಡತಿಯ ಕೋಪಕ್ಕೆ ತುತ್ತಾದ ಪ್ರಸಂಗವನ್ನು ನಾನು ನೋಡಿದುದು ಇದೇ ಮೊದಲು. ನಡು ಬೀದಿಯಲ್ಲಿ, ಗಂಡನ ಕೈಗೆ ತನ್ನ ತಲೆಯ ಕೂದಲು ಸಿಕ್ಕುವ ಮೊದಲೇ ಅವನ ಕತ್ತನ್ನು ಬಗ್ಗಿಸಿಕೊಂಡು ಉರುಳಾಡಿಸಿ, ಎದೆ ಬೆನ್ನುಗಳ ಮೇಲೆ ಗುದ್ದುತ್ತಿರುವ ಭೈರವಿಯ ಬೆನ್ನು ಮಾತ್ರ ನನಗೆ ಕಾಣಿಸುತ್ತಿತ್ತು. ಮುಖವನ್ನು ನೋಡಲು ಪ್ರಯತ್ನಿಸಲಿಲ್ಲ. "ಒಲಿಯದಿದ್ದನಾರಿ ಮಾರಿ" ಎಂಬುದು ನೆನಪಿಗೆ ಬಂದಿತು. ಗಂಡನೂ ಕೋಪಿಷ್ಟ. ಆದಷ್ಟು ವರಸೆಗಳಿಂದಲೇ ಹೆಂಡತಿಯೊಡನೆ ಕುಸ್ತಿ ಮಾಡಿದ. ಕೊನೆಯಲ್ಲಿ ದಾರಿಯಲ್ಲಿ ಹೋಗುತ್ತಿದ್ದ ಗೃಹಸ್ಥರು ಈ ಹೆಂಡತಿಯು ಗಂಡನಿಗೆ ಹಾಕಿದ್ದ ಕತ್ತರಿ ಕಾಲಿನ ಹಿಡಿತವನ್ನು ಬಿಡಿಸಬೇಕಾಯಿತು. ಕುಂಟ ಗಂಡನು ಏದುತ್ತಿದ್ದನೇ ಹೊರತು, ತುಂಟ ಹೆಂಡತಿಗೆ ಸ್ವಲ್ಪವೂ ಆಯಾಸವಾಗಿರಲಿಲ್ಲ. ಆಕೆ ಇನ್ನೂ ಬೀದಿಯ ಬಾಗಿಲಲ್ಲಿ ನಿಂತು ಚಡಪಡಿಸುತ್ತಿರುವಳು. ಆತ ಮಾತ್ರ ಮನೆಯೊಳಕ್ಕೆ ಹೋಗಿಯೇ ಬಿಟ್ಟನು. ಪೂರ್ಣೀ, ನಾನೂ ಒಳಗೆ ಬಂದವನೇ ನನ್ನ ಕೈಕಾಲುಗಳೆಲ್ಲಾ ಸರಿಯಾಗಿವೆಯೋ ನೋಡಿಕೊಂಡೆನು. ಮತ್ತು ಅಲ್ಲಿಯೇ ಇದ್ದ ನಿನ್ನ ಭಾವಚಿತ್ರವನ್ನೂ ನೋಡಿಕೊಂಡೆ. ಸ್ವಲ್ಪ ಸಮಾಧಾನವಾಯಿತು. ನನಗೂ ನಿನಗೂ ಮದುವೆಯ ಮೊದಲೇ ಒಪ್ಪಂದವಾಗಿದೆಯಲ್ಲವೆ! ನೀನು ಲಂಗದ ಹುಡುಗಿಯಾಗಿದ್ದಾಗಲೇ "ನೀವು ನಿಮ್ಮ ಅಪ್ಪನು ನನ್ನ ಅತ್ತೆಯನ್ನು ಹೊಡೆಯುವಂತೆ, ನೀವೂ ನನ್ನನ್ನು ಹೊಡೆಯದಿದ್ದರೆ, ಮಾತ್ರ ನಿಮ್ಮನ್ನು ಮದುವೆಯಾಗುವೆನೆಂದು ನೀನು ಒಬ್ಬಳೇ ನನ್ನನ್ನು ಕದ್ದು ಬಾವಿಯ ಹಿಂದೆ ನಿಂತು ಕೇಳಿದ್ದೆ. ನಾನು ಹೊಡೆಯುವುದಿಲ್ಲವೆಂದೂ ಕೈಮೇಲೆ ಕೈಹಾಕಿ, ಜೊತೆಗೆ ನಿನ್ನ ಗಲ್ಲವನ್ನೂ ಚಿವುಟಿದೆ. ಇಲ್ಲಿನ ವರೆಗೂ ನನ್ನ ಮಾತನ್ನು ನಾನು ನಡೆಸಿಕೊಂಡು ಬಂದಿರುವೆನು. ಇನ್ನು ಮೇಲಾದರೂ ನಡೆಸಿಕೊಂಡು ಬರುವೆನಲ್ಲವೆ ?

ಮಾನವ ಜೀವನಕ್ಕೆ ನಾನಾ ಮುಖಗಳಿವೆ. ನನ್ನ ನಿನ್ನೊಂದು ಅನುಭವವು ಜೀವನದ ಒಂದು ಮುಖ ಮಾತ್ರ. ನಾವು ಅನುಭವಿಸಿದುದು ಮಾತ್ರ

ಜೀವನಾನುಭವವಲ್ಲ. ನಾನು ಇಂದು ನೋಡಿದುದೂ ಜೀವನವೇ. ಅದೂ ಜೀವನದ ಇನ್ನೊಂದು ಮುಖವೇ. ಹೀಗೆ ನೋಡುವುದರಿಂದಲೂ ನಮಗೆ ಅಪಾರ ಲಾಭವಿದೆ. ನೋಡುವ ದೃಷ್ಟಿಯಲ್ಲಿ ನೋಡುವುದಕ್ಕಾಗಿ ಮಾತ್ರ ನೋಡಬೇಕು. ಅನುಭವಕ್ಕಾಗಿ ಅಭ್ಯಸಿಸಬೇಕು. ಜೀವನವೆಂದರೆ ಅದೊಂದು ಅನುಭವಗಳ ನೆನಹಿನಿಂದ ರೂಪುಗೊಳ್ಳುವ ಒಂದು ಚಿತ್ರಕಲೆ. ಉಚ್ಚ ಸಾಹಿತಿಯೊಬ್ಬನು ಜೀವನದ ಬಗ್ಗೆ ಅಂದಿರುವ ಮಾತುಗಳು ಎಷ್ಟು ಸೊಗಸಾಗಿವೆ ನೋಡು "ಜೀವನ ಪುಸ್ತಕದ ಮೊದಲ ಹಾಳೆಯಲ್ಲಿ ವಸಂತಮಾಸದ ಉದ್ಯಾನವನವಿದೆ. ಆ ಉದ್ಯಾವನದಲ್ಲಿ ಗಂಡು ಹೆಣ್ಣಿನ ಅನುರಾಗದ ಮೊದಲ ಚಿತ್ರ ಸಿಕ್ಕುವುದು. ಅದೇ ಪುಸ್ತಕದಕೊನೆಯ ಹಾಳೆಯನ್ನು ತಿರುವಿನೋಡು. ಅಲ್ಲಿ ಅದೇ ಗಂಡು ಹೆಣ್ಣುಗಳು ಒಂದೆಡೆ ಕುಳಿತು, ಸಣ್ಣ ಹುಡುಗರಿಗೆ ಅಜ್ಜಿ ತನ್ನ ಅನುಭವಗಳನ್ನು ಕತೆಯ ರೂಪದಲ್ಲಿ ಹೇಳುವಂತೆ, ತಮ್ಮ ಜೀವನದಲ್ಲಿ ತಾವು ಅದು ವರೆಗೆ ಹೊಂದಿದ ಸುಖ ದುಃಖಗಳನ್ನು ಒಂದೊಂದಾಗಿ ನೆನಿಸಿಕೊಂಡು ಹೇಳಿಕೊಳ್ಳುವುದನ್ನು ಕಾಣಬಹುದು." ಎಂದು ಬರೆದಿರುವನು, "ನೆನಹು ಬಾಳಿನ ಬುತ್ತಿ" ಎಂದು ನಾನು ನೀನು ಅಡಿಗೆ ಮಾಡುವಾಗ ಬಿಡದೆ ಬೆನ್ನುಬಿದ್ದು, ಒಂದೊಂದೇ ಘಟನೆಯನ್ನು ಹೇಳುತ್ತಿರಲ್ಲವೆ? ಕಷ್ಟವನ್ನು ಕೇಳಿದಾಗ ಉಸ್ಸೆಂದು ಒಲೆಯ ಮೇಲಿನ ಅಕ್ಕಿಯಲ್ಲಿ ನೀರಿಲ್ಲದಂತೆ ನೀನು ಮಾಡುತ್ತಿದ್ದೆ? ಸುಖದ ಘಟನೆಗಳನ್ನು ಬಿತ್ತರಿಸಿದಾಗ, ಪಲ್ಯಕ್ಕೆ ಹೆಚ್ಚು ತುಪ್ಪ ಹಾಕಿ ಒಗ್ಗರಿಸುತ್ತಿದ್ದೆ. ಮತ್ತು ನಾನೇ ತಂದಿರಿಸಿದ್ದ ಒಣ ದ್ರಾಕ್ಷೀ ಬಾದಾಮಿಯನ್ನು ನನಗೇ ತಿನ್ನಿರೆಂದು ಗೋಗರೆದು ಕೊಡುತ್ತಿದ್ದೆ. ಈಗಲೂ ಅಡಿಗೆಯ ಮನೆಯ ಕಡೆಗೆ ತಿರುಗಿ ನೋಡುವೆನು. ನೀನಿದ್ದಾಗ ಬರುತ್ತಿದ್ದ ಆ ಕೋಣೆಯ ಬೆಕ್ಕೂ ಸಹಿತ ಅತ್ತ ಕಡೆಗೆ ತಿರುಗಿಯೂ ನೋಡುವುದಿಲ್ಲ. ಅದಕ್ಕೇನು ಅಗ್ಗ ಅಲ್ಲಿ. ಸ್ನೇಹಿತರೂ ಬರುವರು. ಅನೇಕರಿಗೆ ನೀನಿಲ್ಲದಿರುವುದೇ ಗೊತ್ತಿಲ್ಲ. ಅವರ ಮೂಗು ಒಳಗಿನ ಕಾಫಿಯ ವಾಸನೆಯನ್ನು ಹಿಡಿಯಲು ಹೋಗುವುದು. ನನಗೆ ಅಯ್ಯೋ ಪಾಪವೆನಿಸುವುದು. ಮಾತು ಕತೆಯ ಮಧ್ಯದಲ್ಲಿ ನನ್ನ ಈ ಏಕಾಕಿತನವು ಅವರಿಗೆ ಗೊತ್ತಾದಾಗ, ಅವರು ನಿಷ್ಠುರವಾಗಿ, ನೀವು ಮನೆಯುವರನ್ನು ಕಳುಹಿಸಿಬಾರದಿತ್ತು. ಎಂದು

ಆಗ್ರಹದಪೂರ್ವಕವಾಗಿ ಹೇಳಿಬಿಡುತ್ತಿದ್ದರು. ಅವರಿಗೆ ಸಿಕ್ಕುವ ಶಾಂತಿಯು ದೃಷ್ಟಿಯಿಂದಲ್ಲ. ನನ್ನ ಇಳಿಮುಖವನ್ನು ನೋಡಲಾರದ ಮಮತೆಯಿಂದ. ಅವರಿಗೇನು ಗೊತ್ತು ನನ್ನ ವಿಧಿಯ ವಿನ್ಯಾಸ ಬಾಳಿನ ಒಳತೆರೆ, ಯಾರಿಗಾಗಿಯೋ ಏತಕ್ಕಾಗಿಯೋ ಏನೋ, 1947ರ "ಮಹಾರಾತ್ರಿ"ಯಿಂದ ಆರಂಭವಾದ ನನ್ನ ಈ ಅಗಲಿಕೆಯ ನಾಟಕಕ್ಕೆ ಇನ್ನೂ ಕೊನೆಯಂಕವೇ ಬಂದಿಲ್ಲ. ಈ ನನ್ನ ನಾಟಕದ ಹಲವು ದೃಶ್ಯಗಳಲ್ಲಿ ನೀನು ಆಗಂತುಕೆಯಾಗಿ ಆಗಾಗ ಬರುವುದೂ ಈ ನಾಟಕಕಾರನ ಒಂದು ಚಲ್ಲಾಟವಾಗಿದೆ.

"ಮಹಾರಾತ್ರಿ" ಗೌತಮಬುದ್ಧನಾದ ಮಹಾರಾತ್ರಿ, ನನ್ನ ಪಾಲಿಗೂ ಒಂದು ಸಾರಿ ಬಂದಿತ್ತಲ್ಲವೇ ? ಯಶೋಧರಳಂತೆ ನೀನು ಗಂಡನ ದೇಶತ್ಯಾಗವನ್ನು ತಿಳಿಯದೆ ಮಲಗಿರಲಿಲ್ಲ. ಎಚ್ಚರವಾಗಿಯೇ ಇದ್ದೆ. ನಾನು ದೇಶಭ್ರಷ್ಟನಾಗಿರುವನು. ಎಂದು ಕಾತರದಿಂದ ಅನ್ನುತ್ತಿರುವಾಗ, "ಅದು ನಿಮ್ಮ ಅಭ್ಯುದಯಕ್ಕೆ" ಎಂದು ಅಶರೀರವಾಣಿಯಾಗಿ ಹೇಳಿದವಳು ನೀನು. ಆದರೆ ನಿನಗೆ ಗೊತ್ತಿತ್ತು ನಾನು ಬುದ್ಧನಾಗುವುದಿಲ್ಲವೆಂಬುದು. ಮರಳಿ ಬರುವನೆಂಬ ವಿಶ್ವಾಸವೂ ನಿನ್ನಲ್ಲಿ ಇದ್ದಿತು. ನಾನು ಬುದ್ಧನಾಗಲಿಲ್ಲ ನಿಜ. ಮರಳಿ ನಿನ್ನಲ್ಲಿಗೆ ಬಂದೆನೂ ಹೌದು. ಆದರೆ ಅಂದಿನಿಂದಲೇ ನನ್ನ ಜೀವನದ ಉತ್ತರಾರ್ಧವು ಪ್ರಾರಂಭಿಸಿತೆಂಬುದನ್ನು ಮರೆಯುವಂತಿಲ್ಲ. ಕುಲುಮೆಯಲ್ಲಿ ಬೇಯುತ್ತಿದ್ದರೂ, ಕಮ್ಮಾರನ ಸುತ್ತಿಗೆಯ ಪೆಟ್ಟನ್ನು ತಿನ್ನುತ್ತಿದ್ದರೂ, ಏಟು ಬಿದ್ದಂತೆ ನಾನು ಮೂರ್ತಿಯಾಗುತ್ತಿರುವೆನು. ಅದೊಂದೇ ನೆಮ್ಮದಿಯಿಂದ ನೀನು ನನ್ನ ಅಗಲಿಕೆಗೆ ಸಮಾಧಾನವನ್ನು ತಂದುಕೊಳಬೇಕು.

ಏಕೋ ಪತ್ರ ಮುಗಿಯುವಂತಿಲ್ಲ. ಮತ್ತೆ ಬರೆಯುವುದು ಇದ್ದೇ ಇದೆ. ಇಷ್ಟಕ್ಕೆ ಇಂದು ಮುಗಿಸುವೆನು.

ಓಹೋ ಮರೆತಿದ್ದೆ, ಒಳಗಿನ ಗಂಡ ಹೆಂಡಿರ ಜಗಳದ ಮಂಗಳವನ್ನು ಹೇಳುವುದನ್ನು ಅರ್ಧ ಬರೆದ ಪತ್ರವನ್ನು ಮುಗಿಸಬೇಕೆಂದು ಸಂಜೆ ಕಚೇರಿಯಿಂದ ಮನೆಗೆ ಬಂದೆನು. ಅದೇ ಜಗುಲಿ. ಅಲ್ಲಿ ಎಂದಿನಂತೆ ಕುಂಟ

ಗಂಡ, ತುಂಬ ಹೆಂಡತಿ ಇಬ್ಬರೂ ಅಡಿಕೆ ಎಲೆ ಜಗಿಯುತ್ತ ಕುಳಿತಿರು ವರು. ಅಕ್ಕಪಕ್ಕದವರು ತಿರುಗಿ ನೋಡುವಷ್ಟು ನಗುವು ಅವರಿಬ್ಬರ ಸಲ್ಲಾಪಗಳಿಂದ ಮಧ್ಯೆ ವರ್ತಿಸುತ್ತಿತ್ತು. ಜೀವನ ಗಂಡು ಹೆಣ್ಣಿನ ಬೆಸುಗೆ ಎಂತಹದು? ಆದ್ದರಿಂದಲೇ ನಮ್ಮ ಹಿರಿಯರು 'ಗಂಡ ಹೆಂಡಿರ ಜಗಳ ಉಂಡು ಮಲಗುವತನಕ' ಎಂದಂದರು. ಆದರೆ ನನ್ನ ನಿನ್ನ ಪತ್ರವ್ಯವಹಾರ ಜೀವನದ ಉದ್ದಕ್ಕೂ ನಡೆಯುವುದು.

ಇಂದು ಗುರುವಾರ ನನ್ನ ಗುರುದೇವನ ಪ್ರಾರ್ಥನಾದಿನ. ಮುಂಜಾನೆ ಪ್ರಾರ್ಥನೆ ಮುಗಿದು ಸಂಜೆ ವಾರದ ದಿನಚರಿ ಬರೆಯುವನೆಂದು ಕುಳಿತುಕೊಂಡಾಗ, ನಿನ್ನ ಹಿಂದಿನ ಪತ್ರಕ್ಕೆ ಉತ್ತರ ಕೊಡಬೇಕೆಂಬ ಅಂತರ್ ಪ್ರೇರಣೆಯಾಯಿತು.

ನಿನ್ನ ಪತ್ರ ಚಿಕ್ಕದಾಗಿದ್ದರೂ ಹತ್ತಾರು ಸಲ ಓದುವಂತೆ ಬರೆದಿರುವೆ. ಕ್ಷಮಿಸು; ತಡೆಯಲಾರದೆ ನಿನ್ನ ಪತ್ರವನ್ನೂ ನನ್ನ ಆತ್ಮೀಯರೊಬ್ಬರಿಗೆ ಓದಿ ತೋರಿಸಿದೆನು. ಅದರಲ್ಲೇನು ಭಯ? ಜಗತ್ತಿಗೆ ಹೇಳಬೇಕಾದ ಮಾತನ್ನೇ ನೂರು ವರ್ಷದ ಮುದುಕಿ ಹೇಳಿದಂತೆ ಹೇಳಿರುವಿ.

ನೀನು ಬರೆದಿರುವಂತೆ ನಮಗೆ ಒಡತನವು ವೃದ್ಧಾಪ್ಯವನ್ನೂ ತಂದಿ ರುವುದು ಸುಳ್ಳಲ್ಲವಾದರೂ, ಈ ಮುಪ್ಪಿನ ಜೊತೆಗೆ ಜಗತ್ತಿನ ಜೀವಾಳ ವನ್ನೂ ಅರಿತುಕೊಳ್ಳುವ ಅರಿವನ್ನೂ ತಂದುಕೊಟ್ಟಿಲ್ಲವೆ? ಹಾಗೆ ಅರಿವು ಬರದಿದ್ದರೆ, ನಮಗೆ ಬಂದ ಮಹಾ ವಿಪತ್ತುಗಳಲ್ಲಿ ನಾವು ನೆಲೆ ಕಾಣದೆ ಮುಳುಗಿಹೋಗುತ್ತಿರಲಿಲ್ಲವೇ?

ನಿಜ. ಜನರು ತಮಗೆ ಬೇಕಾದಾಗ, ತಲೆಯಮೇಲೆ ಹೊತ್ತು ಕುಣಿಸುವರು. ಬೇಡಾದಾಗ, ಕಾಲು ಕೆಳಗೆ ಹಾಕಿ ತುಳಿದುಬಿಡುವರು. ದಯದಾಕ್ಷಿಣ್ಯವಿಲ್ಲ. ಇದು ಜಗತ್ತಿನ ಬಹು ಜನರು ಅನುಭವಿಸುತ್ತಿರುವ ಅನುಭವ; ಪರಿತಪಿಸುತ್ತಿರುವ ಪರಿಶ್ರಮ. ಬೇಡವೆಂದರೆ ಬಿಡುವುದೆ? ನಾವು ಮನುಷ್ಯರಲ್ಲವೆ? ನೀನು ನಿನ್ನ ಪತ್ರದಲ್ಲಿ ಬಹು ಸೊಗಸಾದ ಉಪ

ಮೆಯನ್ನು ಕೊಟ್ಟಿರುವ 'ಜನರು ಗುಡ್ಡದಮೇಲೆ ಏರಿಸುವಾಗ ಮೆಟ್ಟಲುಗ
ಳಿಲ್ಲದೆ ಮೇಲೇರಿಸುವರು. ಇಳಿಸುವಾಗ ಹಿಂದುರುಗಿ ನೋಡಿದರೆ ಮೂಳೆ
ನುಚ್ಚಾಗುವಂತೆ ತಳ್ಳಿಬಿಡುವರು. ದಯ ದಾಕ್ಷಿಣ್ಯ ಆ ಮೇಲೆ.'

ನಾನು ಈ ಹಿಂದೆಮಾಡಿಯುತ್ತಿದ್ದ ಆ ಸಂಸ್ಥೆಯಲ್ಲಿ. ತಾಯಿಯನಾಗಲ್ಲದಿ
ದ್ದರೂ ಅವರ ದಾಯಿಯಾಗಿ ದುಡಿಯುತ್ತಿದ್ದೆ. ಶ್ರೀಮಂತ ತಾಯಿ, ಮಗು
ವನ್ನು ಕಷ್ಟಪಟ್ಟು ಹೆರುವಳು, ನಿಜ. ಆದರೆ ಆದರೆ ಆ ಮಗುವಿಗೆ ಶೀತೋಷ್ಣ
ವಾಗದಂತೆ ನೋಡಿಕೊಳ್ಳುವುದು ಆಕೆಗೆ ಬರದು. ಕಲಿಯಲೂ ಬೇಸರ.
ಹೀಗಾಗಿ ನಂಬಿಗೆಯ ಸೇವಕಿಯೊಬ್ಬಳ ಮಡಿಲಿಗೆ ಈ ಮಗು ಬೀಳುವುದು.
ಮಗುವಿಗೆ ಹಾಲು ಕುಡಿಸಿದರೆ ತನ್ನ ಸೌಂದರ್ಯ ಬತ್ತಿ ಹೋಗುವುದು ಎನ್ನು
ವರೋ ಉಂಟು. ಅಂತಹ ಸಮಯದಲ್ಲಿ ಈ ಸೇವಕಿಯೇ ಶೀಶೆಯ
ಹಾಲನ್ನು ಕುಡಿಸುವಳು. ತನಗೊಂದು ಹಾಲು ಕೂಸಿದ್ದರೆ, ತನ್ನ ಎದೆಯ
ಹಾಲನ್ನೂ ಕುಡಿಸಿ ಶಿಶುವನ್ನು ಸಾಕುವಳು. ಬೆಳೆಯುತ್ತಿರುವ ಮಗುವಿಗೆ
ತಾಯಿ ದಾಯಿಯವರ ಮಧ್ಯೆ ಇರುವ ಅಂತರ ಎಂತು ತಿಳಿಯಬೇಕು? ಅದು
ದಾಯಿಯನ್ನೇ ತಾಯಿಯೆಂದು ಕರೆಯಲಾರಂಭಿಸುವುದು. ಮಗುವಿಗೆ ಈಗ
ಲಾಲಿ ಹೇಳಿ ಬೆನ್ನುತಟ್ಟಿ ಮಲಗಿಸುವುದು ಬೇಕಾಗಿಲ್ಲ. ತಾನಾಗಿ ತಾನೇ
ಮಲಗಿಕೊಳ್ಳುವುದು. ಅಂಬೆಗಾಲಿಡುವುದು. ಆದರೆ ದಾಯಿಯನ್ನು ತಾಯಿ
ಯಂತೆ ನೋಡುವುದನ್ನು ಮಾತ್ರ ಬಿಡಲಿಲ್ಲ. ಇನ್ನುಳಿದಿರುವುದು ಮಗುವನ್ನು
ತಳ್ಳುವ ಗಾಡಿಯಲ್ಲಿ ಕೂಡ್ರಿಸಿಕೊಂಡು ಗಾಳಿಗೆ ಅಡ್ಡಾಡಿಸುವುದು. ಇಷ್ಟರ
ಲ್ಲಿಯೇ ಈ ಕೆಲಸಕ್ಕೆ ಮಾತುಗಾತಿ ಸೇವಕಿಯೊಬ್ಬಳು ಬಂದು ಕೈಬಾಯಿ
ತಿರುವುತ್ತ ತಾನೇ ನೂರೊಂದು ಮಕ್ಕಳನ್ನು ಸಾಕಿದ ಕತೆಯನ್ನು ಹೇಳು
ವಳು. ತಾಯಿಗೆ ಆಸೆ ತನ್ನ ಮಗು ಅಂತಹವರ ಕೈಯಲ್ಲಿ ಬೆಳೆಯಲೆಂದು.
ಸರಿ; ಹೊರಗೆ ಮಗುವನ್ನು ಅಡ್ಡಾಡಿಸುವ ಕೆಲಸವು ಆವಳಿಗೆ ಹೋಗುವುದು.
ಎತ್ತಿದವರ ಕೈಕೂಸು ಎನ್ನುವಂತೆ ಆ ಮಗು ಅವಳನ್ನು ಹೊಂದಿಕೊಳ್ಳುವು
ದಕ್ಕೆ ತೊಡಗುವುದರಲ್ಲಿಯೇ ಮನೆಯ ಯಜಮಾನಿ ತಾಯಿಗೆ ಈ ಇಬ್ಬರ
ದಾಯಿಯರ ಅವಶ್ಯಕತೆಯೇ ಬೀಳುವುದಿಲ್ಲ. ಇಂತಾಯಿತು ನನ್ನ ಉದ್ಯೋಗ
ಕ್ಷೇತ್ರದ ಪದಭ್ರಷ್ಟತೆಯ ಕತೆ.

ಈಗಲಾದರೂ ಏನು? ನಾನು ಸುತ್ತುಮುತ್ತಲೂ ಕುಹಕತನವನ್ನು ಕಣ್ಣಾರೆ ಕಾಣುತ್ತಿರುವೆನು. ಅಸೂಯೆಯನ್ನು ಅನುಭವಿಸುತ್ತಿರುವೆನು. ಕಣ್ಣಿನಲ್ಲಿ ಕೀಳುತನದ ನೋಟವನ್ನು ನೋಡುತ್ತಿರುವೆನು. ಒಡೆಯನ ತೃಪ್ತಿಗಾಗಿ ಏನುಬೇಕಾದರೂ ಮಾಡುವ, ಮಾಡ ಲಾಗದಿದ್ದರೆ, ಸುಳ್ಳನ್ನು ಹೇಳಿಯಾಗಲೀ ಒಡೆಯನನ್ನು ರಮಿಸುವ ಸೇವಾವೃತ್ತಿಯ ಮಹಾ ಮೂರ್ಖರನ್ನೂ ನೋಡಿ ನೋಡಿ ಸಾಕಾಗಿದೆ. ನನ್ನ ಸತ್ವದ ಶಕ್ತಿಯಿಂದ ಇವೆಲ್ಲವನ್ನು ನಿವಾರಿಸುವಷ್ಟು ಅಂತರ ಶಕ್ತಿ ನನಗೆ ಬರುವದೇ? ನೆಮ್ಮದಿ ಯಿಲ್ಲ. ಇದೆಲ್ಲಾ ಬಡ ಬುದ್ಧಿಕೆಯ ಆಟ. ಸ್ವಲ್ಪ ತಾಳು. ಎಲ್ಲವೂ ಸರಿಹೋಗುವುದು ಎಂದು ಒಮ್ಮೊಮ್ಮೆ ನನಗೇ ನಾನೇ ಬುದ್ಧಿ ಹೇಳಿ ಕೊಳ್ಳುವೆನು. ಆದರೂ ಹಿಂದಿನ ನೆನಪು ಮನಸ್ಸಿಗೆ ಬಂದಾಗ ಮಾತ್ರ ಶರಣು ಶರಣು ಎಂದು ಹೇಳಿ ಓಡಿಹೋಗುವಂತಾಗುತ್ತಿದೆ. ಮನೆಗೆ ಬಂದು ಗುರುರಾಯರ ಚರಣದಲ್ಲಿ ತಲೆ ಇಟ್ಟೊಡನೆಯೇ ಛೀ, ಛೀ ಇಂತಹುದದಕ್ಕೆ ಚಲಿತನಾಗುವುದೇ! ಇದು ಬಲಿತ ಮನೋ ವೃತ್ತಿಯವನಗಲ್ಲ! "ತಾಳು, ತಾಳಿದವನು ಬಾಳಿಯಾನು" ಎನ್ನಿಸುವ ಧ್ವನಿ ಕೇಳಿಬರುವುದು. ಜಗತ್ತು ನಿಸ್ಸಾರವಾಗಿದೆ; ಅದೇನೋ ಜೊಗಸೆಯುಗಲವಿಲ್ಲ ಎಂಬ ಧೈರ್ಯ ಬರುವುದು. ಏನೋ ವಿಷಯಾಂತರವಾಯಿತು. ಈ ಪತ್ರ ಇಷ್ಟಕ್ಕೆ ಸಾಕು.

**ಇತಿ ನಿನ್ನ ಪತಿ.**

x x x

# [ ೩ ]

**ಏಕೆ ನನ್ನೊಡತಿ,**

ಮನಸ್ಸಿಗೆ ಬಹುವಾಗಿ ಹಚ್ಚಿಕೊಂಡಂತಿದೆ? ನಿನ್ನ ಪತ್ರವನ್ನು ನೋಡಿ ದರೆ ಗಾಬರಿ, ದುಃಖ, ಕಷ್ಟ ಎಲ್ಲವನ್ನೂ ಮೇಳವಿಸಿಕೊಂಡು ಬರೆದಂತಿರು

ವುದು. ಹೋಗುವಾಗ ನೀನು ನನಗೆ ಕೊಟ್ಟ ಅಭಯದಾನವನ್ನು ಮರೆತೆಯೇನು? "ನನ್ನ ಸೀರೆಯನ್ನು ವೀರಗಚ್ಚೆಯಾಗುಡುವೆನು. ಶ್ರೀಮತಿ ........ಯಾಗದೆ, ಶ್ರೀಮಾನರಾಗುವೆನು. ನೀವು ನನ್ನ ಯೋಚನೆ ಬಿಡಿರಿ. ಸಂಸ್ಥೆಯನ್ನು ಊರ್ಜಿತಗೊಳಿಸಿ. ಅದರಿಂದ ನಿಮಗೆ ಶಾಶ್ವತವಾದ ಹೆಸರು ಬರುವುದು ಎಂದು ಆಶೀರ್ವದಿಸಿ ಹೋದವಳು ನೀನು. ನಿನ್ನ ಧೈರ್ಯವೆಂಬ ಉರುಗೋಲೇ ನನ್ನ ಜೀವನದ ಸಂಕೋಲೆಗಳನ್ನು ಬಡಿದೋಡಿಸುವ ಬಾರುಗೋಲು. ಅದನ್ನು ಕಿತ್ತುಕೊಂಡು ನನ್ನನ್ನು ಹೇಳವನನ್ನಾಗಿ ಮಾಡಬೇಡ.

ಬಾಳಿನಲಿ ಬಲು ಬಯಕೆ,
ಒಲುಮೆಯಾ ನನ್ನಾಕೆ.
ನಾಳಿನಲಿ ಬದುಕೆಂಬ
ಹುರುಪನೀವಳು ಆಕೆ"

ಎಂದು ನನ್ನಾಕೆಯನ್ನು ಕುರಿತು ಕವನ ಕಟ್ಟಿ ನಾನು ಕುಣಿದಾಗ, ತಾಳಗೂಡಿಸಿ, ಸ್ವರಗೊಟ್ಟು 'ಯಾರಾಕೆ' ಎಂದು ನೀನಂದ ಆ ದಿವ್ಯ ದಿನವನ್ನು ಇನ್ನೊಮ್ಮೆ ನೆನಸಿಕೋ. ಅಂದು ನೀನು ನನಗೆ ಶಕ್ತಿದೇವಿಯಾಗಿ ಕಂಡೆ. ಮುಚ್ಚಿನಗುವ ಮುಗುಳು ನಗೆಯಲ್ಲಿ ಅಭಿಮಾನವು ಕೋಡಿಯೊಡೆದಿದ್ದಿತು. ನಿನ್ನ ಗಾತ್ರವಿಲ್ಲದ ಸೊಂಟಕ್ಕೆ ಅಪಾರವಾದ ಧೈರ್ಯದ ಸುತ್ತಪಟ್ಟಿಯಂತೆ ಕಂಡಿತು. ನೀನು ಸೆರಗು ಸುತ್ತಿ ನನ್ನನ್ನು ಒರಗಿನಿಂತಾಗ ನಿಮ್ಮ ತಂದೆ ಅನೇಕ ಸಾರಿ, ನನ್ನ ಮಗಳು ಗಂಡಸಾಗಿ ಹುಟ್ಟಬೇಕಾಗಿದ್ದಿತು ಎಂದು ಅನ್ನುವರಲ್ಲದೆ, ಇನ್ನೊಂದು ಕ್ಷಣ ತಡವಾಗಿ ಹುಟ್ಟಿದ್ದರೆ ಗಂಡು ಮಗುವಾಗಿ ಹುಟ್ಟಬೇಕಾಗಿದ್ದಿತೆಂದು ಜಾತಕ ಗುಣಿಸಿದ ಪುರೋಹಿತರು ಹೇಳಿದುದನ್ನೇ ಮತ್ತೆ ಮತ್ತೆ ತಮ್ಮ ಅಳಿಯನ ಎದುರಿಗೇ ಹೆಮ್ಮೆಯಿಂದ ಹೇಳಿಕೊಳ್ಳುವರು. "ಹೌದು ನಿಮ್ಮ ಮಗಳು ಅದಕ್ಕೇ ಗಂಡುಬೀರಿಯಾಗಿರುವದು" ಎಂದು ಹೇಳಿ ಅವರನ್ನು ರೇಗಿಸಲೇ ಎಂದು ಧೈರ್ಯ ಬರುವುದು. ಸೋದರ ಮಾವನೆಂಬ ಸಲುಗೆ ಯಿದ್ದರೂ ಹೆಣ್ಣು ಕೊಟ್ಟ ಮಾವನೆಂಬ ಗೌರವವು ಅಡ್ಡ ಬರುವುದು.

ಇಂತಹ ನನ್ನ "ಗಂಡುಬೀರಿ" ಈಗ ಹೆಣ್ಣುಬೀರಿಯಾಗಿ ಕಣ್ಣೀರು ಕರೆಯುತ್ತಿರುವಂತಿದೆ! ಅಕ್ಕ ಪಕ್ಕದವರ ಸುಖ ಸೊಬಗನ್ನು ನೋಡಿದರೆ ಕಣ್ಣುರಿಬರುವ ಸ್ವಭಾವ ನಿನಗೆ ಮೊದಲಿನಿಂದಲೂ ಇಲ್ಲ. "ರನ್ನ ಚಿನ್ನಗಳೇನು ಚೆನ್ನ–ಓ ಚೆನ್ನ–ನೀನೇ ನನಗೆ ಬಲು ಚೆನ್ನ" ಎಂದು ಕಷ್ಟಪಟ್ಟು ಪ್ರಾಸಗೂಡಿಸಿಹಾಡಿದ ನೀನೇ, ಇಂದು ಅಧೀರತೆಯಿಂದ ನನ್ನ ಧೈರ್ಯವನ್ನು ಅಲುಗಿಸುತ್ತಿರುವೆ. ನಾಲ್ಕುನೂರು ಮೈಲಿ ದೂರದಲ್ಲಿರುವ ನೀನು ನಂಟರಿಷ್ಟರಾರೆಂಬುದನ್ನೂ ಗುರುತು ಅರಿಯದೆ, ಮೂರು ಮಕ್ಕಳ ಮಧ್ಯದಲ್ಲಿ ಕುಳಿತು ಏಕಾಕಿನಿಯಾಗಿ ಜೀವನದ ದಿನಗಳನ್ನು ನೂಕುತ್ತಿರುವ ನಿನಗೆ, ನಿನ್ನ ನೆಮ್ಮದಿ, ಮಕ್ಕಳ ನೆಮ್ಮದಿಗಿಂತಲೂ ನನ್ನ ನೆಮ್ಮದಿಯ ಬಗ್ಗೆ ಇರುವ ಆತುರ, ಕಾತುರ, ಕಳವಳ, ಇವನ್ನು ಕಂಡರೆ, ನಿನ್ನನ್ನೂ ನಿನ್ನ ಪಾಡಿಗೆ ಅಷ್ಟುದೂರ ಬಿಟ್ಟಿರುವ ನನ್ನ ನಿರ್ದಯತ್ವದ ಬಗ್ಗೆ ನಾಚಿಕೆ ನನಗೇ ಬರುವುದು. ಆದರೂ ವಿಧಿಯ ವಿಧಿ ಇಂತಿದೆ ಎಂದು ತಿಳಿದುಕೊಂಡಾಗ, ಕಳೆದ ಜೀವನದ ಸಿಹಿ-ಸವಿಗಳು ನೆತ್ತಿಗೇರಿದಾಗ ಪತ್ರ ಬರೆಯದೆ ವಿಧಿಯಿಲ್ಲ. ಪತ್ರವು ಸ್ವಲ್ಪ ಉದ್ವಿಗ್ನಮಯವಾಗಿದ್ದರೆ, ನೀನು ಇಷ್ಟೊಂದ ಚಲವಿಚಲಿತಳಾಗಿಬಿಡುವಿ. ನನಗಿಂತ ನೀನು ಗಟ್ಟಿಗಳೆಂದು ಭಾವನೆಗಳನ್ನು ಒತ್ತಿಕ್ಕದೆ ಬರೆಯುವೆನು. ಹೀಗಾದರೆ ಇನ್ನು ಮುಂದೆ ಬರಿಯ ಕವಿಯ ಕಲ್ಪನಾ ಸಾಮ್ರಾಜ್ಯದಲ್ಲಿ ವಿಹರಿಸಿ ವಿಹಂಗಮದಲ್ಲಿ ಆಶಾ ಭವನಗಳನ್ನು ಕಟ್ಟುವ ಮಾತುಗಳಿಂದ ಕೂಡಿದ ಪತ್ರವನ್ನು ಬರೆಯುವೆನು. ಆದರೆ ರಸಮಯವಾದರೂ, ಶುಷ್ಕವಾದ ಆ ಪತ್ರಗಳಿಂದ ನನ್ನ ಶ್ರಮ ನಿಷ್ಫಲವಾಗುವುದು. ಅನುಭವಿಸದೆ ಇರುವುದನ್ನು ಅನುಭವಿಸಿದವನಿಗಿಂತ ಹೆಚ್ಚಾಗಿ ನಟಿಸಿ ಬರೆಯುವುದು ನನಗೆ ಬರದು. ನಾನು ಏನನ್ನು ನಿನ್ನಲ್ಲಿ ಕಂಡೆನೋ, ನಿನ್ನೊಂದಿಗೆ ಉಂಡೆನೋ, ನಿನ್ನ ಕಣ್ಣುಗಳಲ್ಲಿ ನನ್ನ ಕಣ್ಣುಗಳನ್ನು, ಕೂಡಿಸಿ ಜಗತ್ತನ್ನು ನೋಡಿದೆನೊ ಅದನ್ನು ಮಾತ್ರ ಬರೆಯಬಲ್ಲೆನು! ಇದು ನಿನಗೆ ನೋವನ್ನು ಮರುಕಳಿಸುವುದಾದರೆ ಪತ್ರವನ್ನು ಬರೆಯುವುದನ್ನೇ ನಿಲ್ಲಿಸಿಬಿಡುವೆನು. ನಾನು ನಿನ್ನ ಪತ್ರಗಳಿಂದ, ನೀನು ನನ್ನ ಪತ್ರಗಳಿಂದ ಜೀವಿಸಬೇಕೆಂಬುದರ ರಹಸ್ಯವನ್ನು ಅರಿತುಕೊಂಡಿರುವೆಯಷ್ಟೆ?

ಇನ್ನು, ಹಿತೋಪದೇಶ ಸಾಕು. ಪತ್ರ ಈಗಾಗಲೇ ಉದ್ದವಾಗಿದೆ. ಇಷ್ಟೊಂದು ಗಂಭೀರವಾದ ಉಪದೇಶವನ್ನೂ ಮಾಡಿದ ನಾನು ಒಮ್ಮೆ ನಿನ್ನನ್ನು ನಗಿಸಬೇಡವೆ? ಜಗದ ಉದ್ದಗಲವನ್ನು ಮೀರಿ ನಿಂತಿರುವ ಮನದ ವಿಸ್ತಾರದಲ್ಲಿ ಕೈಚಾಚಿ ನಿನ್ನ ಮುಟ್ಟಬೇಕಾದರೆ ಈ ಚರ್ಮದ ಕೈಗಳು ಸಾಲವು. ಕಲ್ಪನಾ ಸಾಮ್ರಾಜ್ಯದಲ್ಲಿ ಪ್ರೇಮ ರಸದಿಂದ ಎರಕ ಹೊಯ್ದ ಕೈಗಳು ಬೇಕು.

ನೆನಪು ಹತ್ತಿದರೆ, ಇರುವೆಯ ಸಾಲಿನಂತೆ, ಎಲ್ಲವೂ ಒಮ್ಮೆಲೆ ಸಾಲುಸಾಲಾಗಿ ಬಂದು ನಿಲ್ಲುವವು. ಯಾವುದನ್ನು ಆರಿಸಿಕೊಳ್ಳಲಿ ನಿನ್ನನ್ನು ಕೆಣಕಲು? ಶೃಂಗಾರ ರಸದ ಆ ಹದಿನೈದು ವರ್ಷದ ಹಿಂದಿನ ರಾತ್ರಿಗಳನ್ನು ನೆನಸಿಕೊಡಲೇ? ಆ ಹೊಸಹಸಿರು ಬಳೆಗಳ ಸದ್ದು ಅಂತಃಪುರದಿಂದ ಹೊರಬಿದ್ದು, ಹೊರಗಿನ ಅತ್ತೆ ಮಾವಂದಿರಿಗೆ ಕೇಳಿಸೀತೆಂದು ಎಲ್ಲ ಬಳೆಗಳನ್ನು ಹಿಂಗೈಗೆ ಸರಿಸಿಕೊಂಡು ನನ್ನ ಬಳಿಗೆ ಬಂದು ಕುಳಿತಾಗ, ನಾನು ತುಸು ಗಟ್ಟಿಯಾಗಿ ಮಾತನಾಡಿದರೆ, ಸದ್ದು ಎಂದು ಬಾಯಿ ಅದುಮುತ್ತಿದ್ದ ನಿನ್ನ ಪೇಚಾಟವನ್ನು ನೆನಪಿಗೆ ತಂದರೆ ನಿನಗೆ ನಗು ಬರುವುದೇ ? ಅತಿಯಾಗಿ ನಗಬೇಡ, ಅಜೀರ್ಣವಾದೀತು.

ಸ್ಪ್ರಿಂಗಿನ ಮಂಚ, ಅದಕ್ಕೂ ನಿನ್ನ ಕಟ್ಟಾಣತಿಯೆ? ಕಿರ್ರೆಂದು ಶಬ್ದ ಮಾಡಬೇಡವೆಂದು ಅದಕ್ಕೆ ಬುದ್ಧಿ ಹೇಳುತ್ತಿದ್ದೆ. ಅದು ಅವಿಧೇಯವಾಗಿ ವರ್ತಿಸಿದರೆ ಅದರ ಸಹವಾಸನ್ನೂ ಜೊತೆಗೆ ನನ್ನ ಸಹವಾಸವನ್ನು ಬಿಟ್ಟು ಭೂಶಾಯಿಯಾಗುತ್ತಿದ್ದ ಆ ಮಧು-ಚಂದ್ರಮದರಾತ್ರಿಗಳನ್ನು ನೆನಪಿಗೆ ತಂದರೆ, ನಿನ್ನ ಗಲ್ಲ ಕೆಂಪೇರುವುದೆ? ನೋಡಿಕೊ ಒಮ್ಮೆ ಕನ್ನಡಿಯನ್ನು.

ಎಲ್ಲಕ್ಕಿಂತ ಸೊಗಸು. ನನ್ನ ಮಾವನ ಮನೆಯಲ್ಲಿ ಸಿಂಗರಿಸಿದ ಮಂಚಕ್ಕೇರಿದ ನನ್ನ ಮೊದಲ ರಾತ್ರಿಯನ್ನು ನೆನಸಿಕೊಳ್ಳುವುದು.

ಅಲ್ಲವೇ ಪೂರ್ಣೀ, ನಿನಗೆ ಅಂದೇಕೆ ಅಷ್ಟು ನಾಚಿಕೇ ಬಂದಿತ್ತು? ನಾನೇನು ಅಂದು ತಾನೇ ವಿದೇಶದಿಂದ ಬಂದು ನಿನ್ನ ಕೈ ಹಿಡಿದಿದ್ದೆನೆ?

ನನ್ನನ್ನು ಅದು ವರೆಗೂ ಎಲ್ಲಿಯೂ ನೋಡದಿದ್ದಷ್ಟು ಹೊಸ ತನವನ್ನು ತೋರಿಸಿವೆಯಲ್ಲಾ? ಎಷ್ಟು ಜನರು ಕಷ್ಟಪಡಬೇಕಾಯಿತು ನಿನ್ನನ್ನು ಕತ್ತು ಹಿಡಿದು ಬಾಗಿಲ ಒಳಕ್ಕೆ ನೂಕಲು. ನೂಕಿಸಿಕೊಂಡು ಬಂದ ನೀನು ಅಂದು ನನ್ನಿಂದಲೂ ನೂಕಿಸಿಕೊಂಡೇ ಹೊರಗೆ ಹೋಗುತ್ತಿದ್ದೆ ಅಷ್ಟು ಸಿಟ್ಟನ್ನು ತಂದಿತ್ತು ಆ ನಿನ್ನ ಬಗ್ಗಿಸಿದ ತಲೆ, ಎತ್ತಿ ನಿಲ್ಲಿಸಿದರೂ ಎದ್ದು ಆ ನಿನ್ನ ನಿಲ್ಲದ ತಲೆ, ಅಂದು ಎಂದೂ ಬರದ ಸಹನೆ ನನಗೆ ಬಂದಿತ್ತು! ಅದು ನಿನ್ನ ಸುದೈವ!

ನಿನಗೇನು ಗೊತ್ತು? ನೀನು ನಿನ್ನ ತಾಯಿಯ ಹೊಟ್ಟೆಯಲ್ಲಿರುವಾಗಲೇ ಆ ಮಹಾ ಮಾತೆ, ನನ್ನ ಮತ್ತು ನಿನ್ನ ಅಜ್ಜಿ. ನಿನ್ನನ್ನು ಹೆಣ್ಣೆಂದು ಕಂಡುಕೊಂಡರಂತೆ. ಆಗಲೇ ನಿಶ್ಚಿತಾರ್ಥ ಈ ಹೆಣ್ಣು ಇವನಿಗೇ ಎಂದು. ತೊಟ್ಟಿಲಲ್ಲಿ ನೀನು ಅವತರಿಸಿದೊಡನೆ ಮತ್ತೊಮ್ಮೆ ಸಾಕ್ಷಿ ಪೂರ್ವಕವಾದ ನಿಶ್ಚಿತಾರ್ಥ; ನೀನು ಬೆಳೆದು ಹೆಣ್ಣಾಗುತ್ತಿರುವಾಗ; ನಾನು ರಜದಲ್ಲಿ ಊರಿಗೆ ಬಂದರೆ ನಿನಗೆ ನಿತ್ಯ ಶೃಂಗಾರ, ನಿತ್ಯ ನಾಚಿಕೆ, ನಿತ್ಯ ಕೀಟಲೆ; ಹೀಗಾಗಿ ಹುಡುಗರು ಆಟದ ಗೊಂಬೆಗಳಿಗೆ ಗಂಡು–ಹೆಣ್ಣೆಂದು ಕರೆದು ಮದುವೆ ಮಾಡುವಂತೆ ನನ್ನ ಅಜ್ಜಿ ನಮ್ಮಿಬ್ಬರಿಗೂ ಪುರೋಹಿತರ ಮಂತ್ರವಿಲ್ಲದೆ, ತಾಲಿಯ ಬಿಗಿತವಿಲ್ಲದೆ, ನೆಂಟರಿಗೆ ಊಟ ಉಪಚಾರಗಳಿಲ್ಲದೆ ಗಂಡ ಹೆಂಡತಿಯರನ್ನಾಗಿ ಮಾಡಿ ಬಿಟ್ಟಿದ್ದಳು. ಗಂಡು–ಹೆಣ್ಣುಗಳಾಗಿ ನಾವು ಬೆಳೆಯಲಿಲ್ಲ. ನೀನು ಅತ್ತೆಯ ಮಗಳಾಗಿ ನಾನು, ಮಾವನ ಮಗನಾಗಿ ಬೆಳೆಯಲಿಲ್ಲ. ಗಂಡ–ಹೆಂಡತಿಯರಾಗಿ ಬೆಳೆದು ಬಂದೆವು. ಅಂತಹ ನಿನ್ನ ಹಳೆಯ ಗಂಡನಾದ ನನ್ನನ್ನು ನೋಡಿ ಹುಲಿಯನ್ನು ನೋಡಿದ ಹಸುವಿನಂತೆ ಬೆದರಿದೆಯೇಕೆ? ಆ ಬೆದರು ಮುಖದಲ್ಲಿ ಲಲ್ಲೆಯಾಡುತ್ತಿದ್ದ ಲಾವಣ್ಯವನ್ನು ಅನುಭವಿಸುತ್ತಿದ್ದ ನನಗೆ ನಿನ್ನ ಈ ಬೆದರಿಕೆಯ ಬಗ್ಗೆ ನಗು ಮತ್ತು ಕೋಪ ಎರಡೂ ಸಮವಾಗಿ ಬಂದವು. ನಾನೇನು ಅಂದು ಹುಲಿಯ ವೇಷವನ್ನು ಹಾಕಿಕೊಂಡು ಬಂದಿದ್ದೆನೆ? ಮಾವನವರು ಪ್ರೀತಿಯಿಂದ ಕೊಡಿಸಿದ ಮೇಲುಕೋಟೆ ಪಂಚೆಯ ಪಂಚಕಚ್ಚೆ, ನಾನೊಪ್ಪಿ ಒಲಿಸಿಕೊಂಡ ಮಿರು ಮಿರುಗು ರೇಶಿಮೆಯ ಜುಬ್ಬ, ಮಿಸೆ ಕಾಣದ

ಮುಖ, ಇವುಗಳಿಂದ ನಿನ್ನಷ್ಟು ಚೆಲುವಿಲ್ಲದ್ದರೂ ನಿನಗೆ ತಕ್ಕಷ್ಟು ಚೆಲುವ ನಾಗಿದ್ದರೂ, ನೀನು ಮೂಕಿಯಾಗಿ ಕುಳಿತರೆ ಕೋಪ ಬರುವುದಿಲ್ಲವೇ? ನೀನೇ ಹೇಳು ನೋಡೋಣ?

ಕೊನೆಗೆ ನನ್ನ ಸಹಾಯಕ್ಕೆ ಬಂದವರಾರು ಗೊತ್ತೆ? ಹೇಳಿಬಿಡಲೆ? ಸಿಟ್ಟುಬಂದು ಅಲ್ಲಿ ನನ್ನ (ಚಿತ್ರದ) ಗಾಜನ್ನು ಹೊಡೆದೀಯೆ? ಅಟ್ಟದ ಮೇಲಿದ್ದ ಶ್ರೀಮಾನ ಮಾರ್ಜಾಲರಾವ. ಅದಕ್ಕೆ ನನ್ನ ಕಷ್ಟ ಅರ್ಥವಾಗಿರಬಹುದು. ನಿನ್ನ ಮೌನವೂ ಸೇರದಿರಬಹುದು. ಒಮ್ಮೆಲೆ ಅಟ್ಟದ ಮೇಲಿದ್ದ ಪಾತ್ರೆ ಯನ್ನು ಉರುಳಿಸಿತು. ಶಬ್ದ ಸ್ವಲ್ಪವಾಗಲಿಲ್ಲ. ನಿಶ್ಶಬ್ದವಾದ ರಾತ್ರಿಯಲ್ಲಿ ಈ ಶಬ್ದವೇ ನಿನ್ನನ್ನು ಅಲುಗಿಸಿತು. ಮೂರು ಮೊಳದ ದೂರದಲ್ಲಿದ್ದ ತಲೆ ತಗ್ಗಿಸಿ ಅಶೋಕವನದಲ್ಲಿ ಸೀತೆ ಕುಳಿತಂತೆ ಕುಳಿತಿದ್ದ ನೀನು ಒಮ್ಮೆಲೆ ಬೆಕ್ಕು ಹಾರಿದಂತೆ ಹಾರಿದೆ ನನ್ನ ಪಕ್ಕಕ್ಕೆ! ಮುಂದಿನದನ್ನು ಬರೆದು ಬಿಟ್ಟರೆ ನೀವೆಷ್ಟು ಬಣ್ಣಗೇಡಿಗಳು ರಸಾಭಾಸಿಗಳು ಎಂದು ಬಯ್ಯುವೆ ಎಂಬ ಹೆದರಿಕೆಯಿಂದ ಬರೆಯುತ್ತಿಲ್ಲ. ಅದೋ ಮಧ್ಯರಾತ್ರಿಯ ಹನ್ನೆ ರಡು ಬಡೆಯುತ್ತಿದೆ. ಆಕಳಿಕೆಯ ಜೊತೆಗೆ ವೈಮುರಿತನವೂ ಬರುತ್ತಿದೆ. ಆದ್ದರಿಂದ ಈ ಪತ್ರವನ್ನು ಇಷ್ಟಕ್ಕೆ ಮುಗಿಸುವನು. ನಿದ್ರೆಯ ರಾಜ್ಯದಲ್ಲಿ ಬೆಂಗಳೂರು–ಹುಬ್ಬಳ್ಳಿಗಳ ದೂರದ ವಿಚಾರವಿಲ್ಲ. ಕಣ್ಣು ಮುಚ್ಚಿದ ಕೂಡಲೇ ನಾನು ಅಲ್ಲಿಗಾದರೂ ನೀನು ಇಲ್ಲಿಗಾದರೂ ಬರಲೇಬೇಕಲ್ಲವೆ? ಇಳಿ ವಯಸ್ಸಾಯಿತೆಂದು ನೀನು ಇನ್ನಷ್ಟು ಮಂದಗಮನೆಯಾಗಿ ಬರಬೇಡ. ನಾನು ಬಯಸಿದ ನಿಮಿಷದಲ್ಲಿ ಗಂಧರ್ವರಂತೆ ರೆಕ್ಕೆಗಳನ್ನು ಕಟ್ಟಿಕೊಂಡು ಹಾರಿಬಿಡು. ನೀನು ಹಾರಿಬರದಿದ್ದರೆ ನಾನು ಕಲ್ಪನೆಯೆಂಬ ಕೀಲ್ಕುದು ರೆಯ ಮೇಲೆ ಕುಳಿತು ಬಂದುಬಿಡುವೆನು. ಮನೆಯ ಬಾಗಿಲ ಚಿಲಕವಿದ್ದ ರೇನು ಮನದ ಬಾಗಿಲು ತೆರೆದಿರುವುದಲ್ಲವೆ? ನೀನು ಆಘ್ರಾಣಿಸುತ್ತಿರುವ ಗಾಳಿಯಲ್ಲಿನ ತಂಪು ಹವವಾಗಿ ನಾನು ಬರುತ್ತಿರುವೆನು. ನನ್ನನ್ನು ತಡೆಯು ಬಲ್ಲವರಿಲ್ಲ. ಗುಡನೈಟ.

**ಇತಿ ನಿನ್ನವನೇ**

X X X

# [೪]

**ಒಲುಮೆಯ ಚಿಲುಮೆ,**

ನಿನ್ನ ಪತ್ರ ಬಂದು ತಲುಪಿತು. "ನೀನಾದರೂ ರಸವತ್ತಾದ ಪತ್ರ ಬರೆದು ನನ್ನ ಮನಸ್ಸನ್ನು ಶಾಂತಪಡಿಸಿರಿ." ಎಂದು ಕೇಳಿಕೊಂಡಿರುವಿ. ನೀನಿಲ್ಲದ ನನ್ನ ಜೀವನದಲ್ಲಿ ರಸ ಒಸರುವುದೆಂತು? ಪತ್ರಗಳು ರಸವತ್ತಾಗ ಬಲ್ಲವೆಂತು? ದುಂಬಿ ಝೇಂಕರಿಸುವುದು ಪುಷ್ಪದ ಬಂಡಿನವಾಸನೆ ಮೂಗಿಗೇರಿದಾಗಲಲ್ಲವೆ? ಏಕಾಕಿ ಜೀವನದಲ್ಲಿರುವ ಈ ನಿನ್ನ ದುಂಬಿಗೆ ಈಗ ಸ್ಫೂರ್ತಿಯನ್ನು ಕೊಡುವುದು ಗತ ಜೀವನದ ನೆನಪು. ಈ ನೆನಪಿನಲ್ಲೇ ಸ್ವರ್ಗ ನರಕಗಳನ್ನು ಕಾಣುತ್ತಿರುವ ನಾನು, ನೆನಪಿನ ತೆರೆಯ ಮೇಲೆ ಏನು ಬಿಂಬಿಸುವುದೋ ಅದನ್ನು ವಂಚನೆಯಿಲ್ಲದೆ ಬರೆಯುವೆನು.

ತಾಪತ್ರಯಗಳ ವರದಿಯನ್ನು, ಈ ನಿನ್ನ ಪತ್ರದಲ್ಲಿ ಬೇಕೆಂತಲೇ ಕಡಮೆ ಮಾಡಿರುವಿ. ಆದರೂ ಒಂದು ಮಾತಿನಲ್ಲೇ ಹೇಳಬೇಕಾದದ್ದೆಲ್ಲವನ್ನು ಹೇಳಿ ಮುಗಿಸಿರುವಿ. "ಹೇಗೋ ತೇಲಲಾರದ ದೋಣಿಯನ್ನು ಬಲವಾದ ಹುಟ್ಟಿನಿಂದ, ತೇಲಿಸುತ್ತ ತಳ್ಳುತ್ತಿರುವೆನು. ಎಂತು ದಡ ಮುಟ್ಟುವುದೋ ಈಗಲೇ ಹೇಳಲಾರೆ." ದೋಣಿ ಮುಳುಗುವುದೆಂಬ ನಿರಾಶೆಯೂ ಇಲ್ಲ. ದಡಮುಟ್ಟುವುದೆಂಬ ನಂಬಿಕೆಯೂ ಇಲ್ಲ. ಇವೆರಡರ ಮಧ್ಯದಲ್ಲಿ ನೀನು,-ನಿನ್ನ ದೋಣಿ, ಅವರ ಯಾನ ಏನಾಗಿರುವುದೆಂಬುದನ್ನು ನಾನು ಚಿತ್ರಿಸಿಕೊಳ್ಳಲಾರೆನೆ? ಚಿತ್ರಿಸಿಕೊಂಡಿರುವೆನು. ಆದರೇನು? ಆ ದೋಣಿಗೆ ನಾನು ಕಾಲಿಟ್ಟರೆ ಎಲ್ಲೂ ಇಲ್ಲದ ಬಿರುಗಾಳಿ; ಅಲೆ, ಅಬ್ಬರ, ಉಬ್ಬರಗಳೇ ಬಂದಡರುವುವಲ್ಲ? ಇಂತಹ ಈ ಸಂಸಾರ ನೌಕದ ಸ್ವಾರಸ್ಯದ ರಹಸ್ಯವೇನೋ?

"ಸ್ವರ್ಗಕ್ಕೆ ನಾನು ಹೋದರೂ ಅಲ್ಲಿ ನಾನು ನನ್ನ ಹೆಂಡತಿಯನ್ನು ಸಂಧಿಸುವುದಾಗದಿದ್ದರೆ ಅದು ನನಗೆ ಸ್ವರ್ಗವೇ ಅಲ್ಲ. ಆ ಸ್ವರ್ಗವೇ ನನಗೆ ಬೇಡ" ಎಂದೊಬ್ಬ ಆಂಗ್ಲ ಸಾಹಿತಿ ಹೇಳಿರುವುದು ನನಗೆ ಗೊತ್ತಿಲ್ಲ

ದಿಲ್ಲ. ಆದರೆ ಈ ಇಹಲೋಕದಲ್ಲಿರುವ ಇಂದು ನಾಳೆಯಲ್ಲೂ ನಿನ್ನೊಡನೆ ಇರುವ ಸೌಭಾಗ್ಯ ನನಗೆ ಇಲ್ಲವೆಂದ ಮೇಲೆ ಈ ಜೀವನವದೆಷ್ಟು ಸೌರಭಮಯವಾಗಿರಬೇಕು? ಈ ಪ್ರಶ್ನೆ, ಈ ಪರಿಸ್ಥಿತಿ ನನಗೊಬ್ಬನಿಗೇ ಅಲ್ಲ. ನಿನ್ನ ಪಾಲಿಗೂ ಇರುವುದೆಂದ ಮೇಲೆ, ನಮ್ಮಿಬ್ಬರ ದಾಂಪತ್ಯ ಜೀವನವು ನೀನಂದಂತೆ ತೇಲಿಬಾರದ ದೋಣಿಯನ್ನು ತೇಲಿಸಿದಂತೆಯೇ ಇರುವುದು.

ಎಂತಹ ಸೊಗಸಾದ, ಉಚಿತವಾದ ಉಪಮೆಗಳನ್ನು ಕೊಡುವುದನ್ನು ಕಲಿತುಕೊಂಡಿರುವೆ ಪೂರ್ಣೆ? ಇದನ್ನು ಶಾಲೆ ಕಲಿಸಿಲ್ಲ ನಿನಗೆ; ಪುಸ್ತಕ ಹೇಳಿಕೊಟ್ಟಿಲ್ಲ. ನೀನು ಶಾಲೆಯಲ್ಲಿ ಕಲಿತುದು ಏನೆಂಬುದು ನನಗೆ ಗೊತ್ತಿಲ್ಲವೆ? ಚನ್ನಪ್ಪ ಮೇಸ್ತ್ರರ ತ್ರೈರಾಶಿ, ಮುದ್ದೂರಾಯ ಮಾಸ್ತರರ ಚದುರಗಣಿತ, ಸುಬ್ಬರಾಯರ ಭಜನೀಯಾತ್ರೆ. "ವನಿತೆ ಮಲಗಿಹಳೋ ಅಧೈರ್ಯದಿ ಪೈವವನೆನವಳೋ" ಎಂಬ ನಳಚರಿತ್ರೆಯ ಪದ್ಯವನ್ನು ಮಧ್ಯರಾತ್ರಿ ಹೊರಿದರೂ ನೀನು ಉರುವು ಹಾಕುತ್ತಿದ್ದ ದೃಶ್ಯವನ್ನು ನಾನು ಮರೆತಿಲ್ಲ. ಗಂಟಲು ಗೀಚಿ ಹೋದರೂ ಬಿಡುತ್ತಿರಲಿಲ್ಲ. ಇಂತಹ ವಿದ್ಯಾವಿಶಾರದೆ, ಈಗ ಶಾರದೆಯ ಮರಿಯಂತೆ, ಅರ್ಥಗರ್ಭಿತವಾದ ಮಾತುಗಳನ್ನು ಹೊಸೆಯುತ್ತಿರುವೆ.

ಮರತೆಯೇನು? ಮದುವೆಯಾದ ಹೊಸದು, ಶಾಂತಿಪ್ರಸ್ತದ ಮಾತೇ ಇಲ್ಲ; ಆದರೂ ನಿಮ್ಮ ತಾಯಿ ತಂದೆ ನಿನ್ನನ್ನು ನನ್ನ ಮೇಲಿನ ವಿಶ್ವಾಸದಿಂದ ನಮ್ಮ ಮನೆಯಲ್ಲೇ ಬಿಟ್ಟುಬಿಟ್ಟಿದ್ದರು. "ಪಾಪ ಸಾಧುವಾದ ಹಿಂದೆ ಬಂದರೆ ಒದೆಯುವುದಿಲ್ಲ, ಮುಂದೆ ಬಂದರೆ ಹಾಯುವುದಿಲ್ಲ"ವೆಂದು ನನ್ನ ಮಾವ ಅತ್ತೆಯರು ನಂಬಿದ್ದರು. ನಾನಾದರೂ ಈ ನಂಬಿಕೆಯನ್ನು ಬಹು ಕಷ್ಟದಿಂದ ಉಳಿಸಿಕೊಂಡೆನು ಅಲ್ಲವೆ? ಇದಕ್ಕೆ ಕಾರಣ ನನ್ನ ಸಾಧು ತನಕ್ಕಿಂತ ಅಪ್ಪನ ವ್ಯಾಪ್ರುತನವೇ ಅಲ್ಲವೆ!

ನಿನ್ನ ಓದು ಮುಗಿದಿರಲಿಲ್ಲ. ಈ ಓದೇ ನಮ್ಮಿಬ್ಬರ ಮಧ್ಯೆಯ ಮೋಟುಗೋಡೆಯಾಗಿದ್ದಿತು. ದಾಟುವುದು ಕಷ್ಟವಿರಲಿಲ್ಲ. ದಾಟಬೇಕೆಂಬ ದಿಟ್ಟತನ ಮಾತ್ರ ಬರಲಿಲ್ಲ. ನೀನು ಆಗಿನ ದಿನಗಳಲ್ಲಿ ಹೊರಲಾರ

ದಷ್ಟು ಪುಸ್ತಕಗಳನ್ನು ಅಪ್ಪಿ ತಬ್ಬಿಕೊಂಡು ಕಾಲೇಜಿಗೆ ಹೋಗುತ್ತಿದ್ದಾಗ, ಅರ್ಧದಾರಿಗೆ ಅಡ್ಡವಾಗಿ ಬಂದು ಆ ಪುಸ್ತಕಗಳನ್ನು ಕಾಲೇಜಿನ ವರೆಗೆ ಹೊತ್ತು ತಂದು ಕೊಡಲೇ ಎಂದನ್ನಿಸುತ್ತಿತ್ತು. ಆದರೆ ದಾರಿಯಲ್ಲಿ ತಿರುಗಾಡುವವರ ಭಯ; ಮದುವೆಯಾದ ಹೆಂಡತಿಯನ್ನು ಮಾತಾಡಿಸಲು ದಾರಿಯವರ ದಯ ದಾಕ್ಷಿಣ್ಯಗೊಳಗಾಗಿದ್ದ ನನ್ನ ಅಂದಿನ ಸ್ಥಿತಿ, ಇಂದು ನೆನಸಿಕೊಂಡರೆ ನಗು ಬರುವುದಿಲ್ಲ; ನಾಚಿಕೆ ಬರುವುದು. ಹದಿನೈದು ವರುಷಗಳ ಹಿಂದಿನ ಮಾತು. ಮೈಸೂರು ಗಂಡ-ಹೆಂಡಿರ ಸ್ಟ್ರೀಟವಾಕಿಂಗ, ಟಾಕಿಂಗ, ಜೋಲಿಂಗದಲ್ಲಿ ಈಗಿನಷ್ಟು ಮುಂದುವರಿದಿದ್ದರೆ, ನಾನೂ ಸಹ ನಿನ್ನ ಜಡೆಯ ಕುಚ್ಚನ್ನು ನನ್ನ ತೋಳಸಂದಿನಲ್ಲಿ ಸುತ್ತಿಕೊಂಡು ಸುತ್ತಾಡಿ ಬರುತ್ತಿದ್ದೆ.

ಒಂದು ದಿನ; ಅಂದು ಶನಿವಾರ ಅಮ್ಮ ಅಪ್ಪ ಇಬ್ಬರೂ ದೊಡ್ಡ ಮನಸ್ಸು ಮಾಡಿದರು. ಸಂಜೆ ಕೋಟೆಯ ಆಂಜನೇಯನ ಗುಡಿಗೆ ನೀವಿಬ್ಬರೇ ಹೋಗಿರೆಂದು ಹೇಳಿಯೇಬಿಟ್ಟರು. ನೀನು, ಜೊತೆಗೆ ನಿಮ್ಮ ಅತ್ತೆಯನ್ನು ಕರೆಯುತ್ತಿದ್ದುದನ್ನು ನೋಡಿ ಕೆನ್ನೆಗೆ ಎರಡು ಬಿಗಿಯುವಷ್ಟು ಕೋಪ ಬಂದಿತ್ತು; ಬಿಗಿಯಲಿಲ್ಲ. ಏನು ಮಾಡಲಿ? ಇನ್ನೂ ಪೂರ್ಣ ಲೈಸೆನ್ಸ ಸಿಕ್ಕಿರಲಿಲ್ಲ. ಹೇಗೋ ನಾವಿಬ್ಬರೇ ಹೊರಬಿದ್ದೆವು. ಅಂದು ನೀನುಟ್ಟ ಮೇಘವರ್ಣದ ಸೀರೆ ನಿನಗೊಪ್ಪಿದ್ದಿತು. ದೇವಾಲಯವು ದೂರ, ದೂರವಾಗಲಿ, ಎಂದು ಹೆಜ್ಜೆಗಳ ಉದ್ದವನ್ನು ಕಡಿಮೆ ಮಾಡುತ್ತ ನಡೆದುಹೋದ ದಿನವದು. ಹೋದ ಗುರುತಿಗೆ ತೆಂಗಿನಕಾಯಿ ಪ್ರಸಾದ ಮನೆಗೆ ತೆಗೆದುಕೊಂಡು ಹೋಗಬೇಕಾಗಿಲ್ಲದಿದ್ದರೆ ದೇವಾಲಯದ ಮುಂದೆಯೇ ಹಾಯುತ್ತಿರಲಿಲ್ಲ ಅಲ್ಲವೇ ಪೂರ್ಣೆ! ಹೇಗೋ ದೇವಾಲಯವನ್ನು ಪ್ರವೇಶಿಸಿ ತೆಂಗಿನ ಹೋಳು ಮಾಡಿ, ತೀರ್ಥ ತೆಗೆದುಕೊಳ್ಳುವುದೇ ಅವಸರ; ದೇವರಿಗೆ ಕೈ ಮುಗಿಯದೆ ಪಕ್ಕದ ಪಾರ್ಕಿಗೆ ಬಂದು ಕುಳಿತಾಗ, ಅಪ್ಪನೆಲ್ಲಿ ಬಂದು ಬಿಡುವನೋ ಎಂಬ ಅಳುಕು ಇದ್ದರೂ ಮಾತಾಡುವುದೆಲ್ಲವನ್ನೂ ಮಾತನಾಡಿ ಮುಗಿಸಿದೆವು ನಿಜವೆ? ಅಂದಿನ ನಾಸ್ತಿಕತನ ದೇವರಲ್ಲಿ ಇದ್ದ ಅಸಡ್ಡೆ ಇಂದು ನಿನಗೆ ದೇವರಲ್ಲಿ ಅದೂ ಶ್ರೀ ರಾಘವೇಂದ್ರರಾಯರಲ್ಲಿ ಇರುವ

ನಿಕಟನಂಬಿಕೆ ಇವುಗಳನ್ನು ಹೋಲಿಸಿದರೆ ಎಲ್ಲಿಯ ಆ ಪೂರ್ಣಿಮಾ, ಎಲ್ಲಿಯ ಈ ಪೂರ್ಣಿಮಾ? ಮೂವತ್ತು ವರುಷ ತುಂಬುವುದರೊಳಗಾಗಿ ಬಡತನದ ಬವಣೆಯನ್ನು ಬದಿಗೊತ್ತಿ, ನನ್ನ ಬಡ ಪ್ರೇಮವನ್ನು ಎದೆಗೊತ್ತಿಕೊಂಡು, ಲೀಲಾ, ಶಂಕರ, ರಾಘವರನ್ನು ನನಗೆ ಕಾಣಿಕೆಯಾಗಿ ಕೊಟ್ಟಿ. ಈ ಉಪಕಾರವನ್ನು ಕೃತಜ್ಞತೆಯ ಸಹವಾಸದಿಂದ ತೀರಿಸಬೇಕೆಂದು ನನ್ನ ಸರ್ವಶ್ರಮದಿಂದ ಶ್ರಮಿಸುತ್ತಿರುವಾಗಲೇ ಅಗಲಿಕೆಗೆ ಆರಂಭವಾಯಿತು. ದಾರಿದ್ರ್ಯವು ನಮ್ಮ ಒಡನಾಡಿಯಾಗಿಲ್ಲದಿದ್ದರೆ ಈ ಅಗಲಿಕೆಯು ಅಸಂಭವವೆಂದು ನನಗನ್ನಿಸಿದಾಗ ಮಾತ್ರ ಬಡತನವನ್ನು ಬಾಯಿಗೆ ಬಂದಂತೆ ಶಪಿಸುವೆನು. ಆದರೆ ಅದೇ ಬಡತನದ ಬೇಗೆ ನನ್ನ ಕಣ್ಣರಳಿಸಿ, ನನ್ನಂತಹ ಸಾವಿರಗಟ್ಟಲೆ ಸೋದರರ ಗುಡಿಸಲುಗಳತ್ತ ಅದು ನನ್ನನ್ನು ನೂಕಿದಾಗ, ಆಗ ನನಗೆ ಉಕ್ಕಿಬರುವ ಸ್ಫೂರ್ತಿಯನ್ನು ಅನುಭವಿಸಿದಾಗ, ಬಡತನವೇ ಇರಲೆಂದು ಆಶಿಸುವೆನು. ನೀನಿಲ್ಲದ ಸಿರಿತನವು ನನಗೆ ಬೇಡವೆನ್ನುವೆನೇ ಹೊರತು ನೀನಿರುವ ಬಡತನವು ಬೇಕೆಂದರೂ ನೀನಿಲ್ಲದ ಬಡತನವೇ ನನಗೆ ದೊರೆಯುತ್ತಿರುವುದಿಲ್ಲ! ಇದು ಯಾರ ಪ್ರಾರಬ್ಧ?

ನೈ—ಮನಕ್ಕೊಪ್ಪಿದ ವೃತ್ತಿಯೇನೂ ದೊರಕಿದಂತಾಗಿದೆ. ಆದರೆ ನೈ ಮನವನ್ನು ಅಪ್ಪಿದ ಮಡದಿಯನ್ನು ದೂರವಿಡಿಸಿದೆ. ಈ ನಮ್ಮ ವಿರಹ ವಿಧಿಗೆ ವಿಲಾಸವಾಗಿದ್ದರೆ ಅವನೆದುರಿಗೆ ಗೊಣಗುಟ್ಟಲು ನಾವೆಷ್ಟರವರು?

ಇಂದೊಬ್ಬ ನನ್ನ ಮಿತ್ರರು ನೀವೆಷ್ಟುದಿನ ಹೀಗೆಯೇ ಅನಿಶ್ಚಿತವಾಗಿ ನಿಮ್ಮ ಸಂಸಾರದಿಂದ ದೂರಿರುವಿರಿ ಎಂದು ನನ್ನನ್ನು ಕೇಳಿದರು. ಉತ್ತರವನ್ನು ಏನೆಂದು ಹೇಳಲಿ! ಆದರೂ ಅವರ ಬಾಯಿಂದ ಹೊರಬಿದ್ದಾಗ "ಅನಿಶ್ಚಿತವಾಗಿ" ಎನ್ನುವ ಮಾತು ನನ್ನನ್ನು ಅಧೀರಗೊಳಿಸದಿಲ್ಲ. ಇಲ್ಲ. ಎಂದಿಗೂ ಹೀಗೆಯೇ ಇರುವುದಕ್ಕಾಗುವುದೆ ಎಂದು ನಾನು ಗೊಣಗಿಕೊಂಡು ಉತ್ತರವನ್ನು ಕೊಟ್ಟೆನು. ಈ ಉತ್ತರದಿಂದ ಅವರಿಗೆ ಯಾವ ಸಮಾಧಾನವೂ ಆಗಲಿಲ್ಲ. ಅವರಿಗೇನು ಗೊತ್ತು ನನ್ನ ಜೀವನದ ಈ ದೊಡ್ಡಾಟ?

ಲೀಲಾ ದಿನಕ್ಕೆಷ್ಟು ಅಂಗುಲ ಬೆಳೆಯುತ್ತಿರುವಳು ? ಈಗ ಉದಯ ಶಂಕರ ಮುಂಜಾವಿನಿಂದ, ಸಂಜೆಯ ವರೆಗೆ ಎಷ್ಟು ತಾಯಿಯರ ದೂರನ್ನು ತರುತ್ತಿರುವನು ? ಮುದ್ದು ರಾಘವೇಂದ್ರ ನನ್ನ ಫೋಟೋದ ಕಡೆಗೆ ದಿನಕ್ಕೆಷ್ಟು ಬಾರಿ ಕೈ ತೋರಿಸಿ ತನ್ನ ಅಣ್ಣನೊಡನೆ ಮಾತನಾಡಲು ಸೊಂಟದಿಂದ ಕುಸಿದುಬೀಳುವನು ? ಇವೆಲ್ಲವನ್ನೂ ಪತ್ರದಲ್ಲಿ ತಿಳಿಸಬಾರದೆ ? ನನಗೆ ನಾನೇ ಚಿತ್ರಿಸಿಕೊಳ್ಳಬೇಕೆ ?

ನೀವು ಎಂದು ಬರುವಿರಿ ಎಂದು ಪ್ರತಿಯೊಂದು ಪತ್ರದಲ್ಲೂ ಬರೆಯುತ್ತಿರುವಿ ? ಇದಕ್ಕೆ ಮಾತ್ರ ಉತ್ತರವನ್ನು ಬರೆಯುವುದು ಕಷ್ಟವಾಗುವುದು. ಒಂದು ಸಾರಿ ಬಂದು ಹಿಂದುರುಗಿದರೆ ಐವತ್ತು ರೂಪಾಯಿಗಳ ವೆಚ್ಚವಾಗುವುದು. ನನ್ನ ತಿಂಗಳ ಸಂಪಾದನೆಯಲ್ಲಿ ಈ ಐವತ್ತು ರೂಪಾಯಿ ಒಂದು ಸಣ್ಣ ಭಾಗವೇನಲ್ಲ. ಇದರ ಲೆಕ್ಕವೇ ನನ್ನ ಕಾಲಿನ ಉತ್ಸಾಹವನ್ನು ಅಡಗಿಸುತ್ತಿದೆ. ಮನೋವೇಗವನ್ನು ತಡೆಹಿಡಿಯುತ್ತಿದೆ. ಸಂಯಮ ನಿಗ್ರಹಗಳ ಮಾತು ನಲವತ್ತರ ಅಂಚಿನಲ್ಲಿರುವ ನನಗೇ ಇಷ್ಟು ಕಷ್ಟವೆನಿಸಿದರೆ ಹತ್ತು ವರುಷ ಚಿಕ್ಕವಳಾದ ನಿನಗೆ ನಾನು ಕೊಡುತ್ತಿರುವ ಶಿಕ್ಷೆಯ ಉಗ್ರತೆಯನ್ನು ನಾನು ಅರ್ಥ ಮಾಡಿಕೊಂಡಿರುವೆನು. ಅರ್ಥ ಮಾಡಿಕೊಂಡು ಮಾಡುವುದೇನು ? ಇರಲಿ ಮತ್ತೆ ಬರೆಯುವೆನು.

ಇತಿ ನಿನ್ನ ಪತಿ

x x x

[೫]

ನಳಿನ ನಯನೆ,

ಎಲ್ಲವೂ ತಿಳಿಯಿತು. ಸ್ವಲ್ಪ ಸಮಾಧಾನದಿಂದ ಪತ್ರವನ್ನು ಬರೆದಿರುವಂತಿದೆ. ರಘು ನಗುತ್ತಿರಬಹುದು? ಲೀಲ ಹಠಮಾಡಿ ಮೋರೆಯುಬ್ಬಿಸಿಗೊಂಡಿಲ್ಲದಿರಬಹುದು ? ಉದಯ ಸರಿಯಾಗಿ ಶಾಲೆಗೆ ಹೋಗುತ್ತಿದ್ದಿರಬಹುದು ? ಇವೆಲ್ಲವೂ ಸರಿಯಾಗಿದ್ದಾಗ ಕುಳಿತು ಬರೆದ ಪತ್ರದಂತಿದೆ.

ಇಷ್ಟೊಂದು ಧೈರ್ಯ, ಇಷ್ಟೊಂದು ಸಹನೆ, ನಿನಗೆ ಬಂದಿರುವು ದೆಂದರೆ ಯಮನ ಸಾವಿರ ಕೋರೆಗಳನ್ನಾದರೂ ಹಿಡಿದು ಅಲುಗಿಸಬಲ್ಲೆನು.

ಅದಿರಲಿ. ನೀನೀಗ ನನ್ನ ಪರೀಕ್ಷೆಯನ್ನೇ ನಡೆಸಲಾರಂಭಿಸಿರುವೆಯಲ್ಲ? "ಪ್ರಪಂಚದಲ್ಲಿ ಯಾರು ಸುಖಿ" ಎಂಬ ಪ್ರಶ್ನೆಗೆ ನನ್ನಿಂದ ಉತ್ತರವನ್ನು ಕೇಳಿರುವೆ. ಈ ಪ್ರಶ್ನೆ ನನ್ನನ್ನು ಕೇಳಬಾರದ ಪ್ರಶ್ನೆ. ನನ್ನನ್ನು ಉತ್ತರಿಸಲು ತೊಡಗಿಸಬಾರದ ವಿಷಯವಿದು. ಆದರೂ ನಿನ್ನ ಮುಂದೆ ಮುಚ್ಚಿಟ್ಟುಕೊಳ್ಳುವುದೇನಿದೆ ?

ಸುಖಿಯಾರು ಎಂದು ಹುಡುಕುವುದಕ್ಕಿಂತವೆ ಮೊದಲು ಸುಖವೆಂಬುದ ರೇನೆಂಬುದನ್ನು ತಿಳಿದುಕೊಂಡರೆ ಅರ್ಧ ಕಷ್ಟ ತಪ್ಪಿದಂತಾಗುವದು.

ಶ್ರೀಮಂತಿಕೆಯು ಸುಖವೆಂದು ಕೆಲವರು ಅನ್ನುವರು. ಬಡವನಾಗಿರುವ ನನಗೆ ಈ ಮಾತು ನಿಜವೆನಿಸಿದರೆ, ಶ್ರೀಮಂತನನ್ನು ಹೋಗಿ ಕೇಳಿದರೆ ಅವನ ಅತೃಪ್ತಿಗೆ ಮೇರೆಯೇ ಇರುವುದಿಲ್ಲ. ಒಂದು ತಕ್ಕಡಿಯ ಪಕ್ಕದಲ್ಲಿ ಧನವಿದ್ದರೆ ಇನ್ನೊಂದರಲ್ಲಿ ರೋಗ ರುಜಿನ, ಭಯ, ಸಂದೇಹ, ಪಿತ್ತ, ಅಜೀರ್ಣ, ಸಮೇತವಾದ ಹಲವು ದುಃಖಗಳ ಕಂತೆಯೇ ಇರುವುದು. ಹಣದ ತೂಕಕ್ಕಿಂತ ಹೆಚ್ಚು ತೂಗುತ್ತಿರುವ ಇವನಿಗೆ ಸಿರಿವಂತಿಕೆ ತಲೆಗೆ ಭಾರವಾಗಿರುವುದು. ಆದರೂ ಸಿರಿವಂತಿಕೆ ಸಡಿಲಿದರೆ ಅವನ ಮೈ ಚರ್ಮ ಸುಲಿದಂತಾಗುವುದು. ಹೀಗಾಗಿ ಧನ ಬೇಕು, ಅದರ ಜೊತೆಗೆ ಪರಿವಾರ ದೇವತೆಯಾಗಿ ನಿಲ್ಲುವ ಈ ಉಪದ್ರವಗಳು ಬೇಡ. ಈ ಬೇಕು ಬೇಡಗಳ ಮಧ್ಯೆ ಕಂಗಾಲಾಗಿ ತೋರಿಕೆಗೆ ಕಾರು, ತೋರಿಕೆಗೆ ಉಪ್ಪರಿಗೆ, ಜರತಾರಿ ಉಡುಪು ಇದ್ದರೂ ಇವನು ಸದಾ ಅಸಂತುಷ್ಟಿಯಾಗಿಯೇ ಇರುವನು. ಆದ್ದರಿಂದ ಧನದಿಂದ ಸುಖ ಬರುವುದೆಂದರೆ ನಂಬುವುದೆಂತು ? ನಿನಗೆ ನಿದರ್ಶನವಾಗಿ ಒಂದು ಉದಾಹರಣೆಯನ್ನು ಹೇಳಬೇಕೆಂದರೆ ನಮ್ಮೂರಿನ ಸಲಭಯ್ಯನವರು. ಅವರಿಗೇನು ಕಡಿಮೆ ? ಆದರೆ ಅವರ ಕೊರಗಾಟ ನಮ್ಮ ಮಾವನವರ ಮನೆಯ ಜಗುಲಿಯಲ್ಲಿ ನಿಂತರೆ ಅಹೋರಾತ್ರಿಯೂ ಕೇಳುತ್ತಿತ್ತಲ್ಲವೆ ? ಅವರ ಉಬ್ಬಸ ರೋಗಕ್ಕೆ

ಮದ್ದೇ ಇಲ್ಲ. ಉಸಿರಾಡುವ ವರೆಗೂ ಉಸ್ಸೆನ್ನುತ್ತಲೇ ಸಾಯುವುದೊಂದೇ ಉಳಿದಿದೆ. ಲಕ್ಷ್ಮಿ ಒಲಿದು ಮಾಡಿದ ಉಪಕಾರವಾದರೂ ಏನು.

ನನ್ನ ಬಡತನದಿಂದ ಸುಖವಿದೆ ಎಂಬುದಕ್ಕೆ ನಾನು ನೀನು ಇಬ್ಬರೇ ಒಳ್ಳೆಯ ಸಾಕ್ಷಿಯಾಗಿರುವೆವು. ನಮಗೆ ಸಿರಿತನ ಬಂದರೆ ಸುಖವಾಗಿರುವೆವೆಂದು ನಮಗನ್ನಿಸುವುದಾದರೂ, ಉಂಡ ಊಟಕ್ಕಷ್ಟೇ, ತೊಟ್ಟ ಅರಿವೆಗಷ್ಟೇ ತೃಪ್ತಿ ಇರುವವರಿಗೆ ಸಿರಿತನದಿಂದ ಸುಖ ಕಂಡೀತು. ಆದರೆ ಇಷ್ಟು ಸಿಕ್ಕಿದರೆ ಇನ್ನಷ್ಟು ಏಕೆ ಎನ್ನುವುದು, ಇನ್ನಷ್ಟು ಸಿಕ್ಕಿದರೆ ಮತ್ತಷ್ಟು ಬೇಕು ಅನ್ನುವ ಮಾನವನ ಆಸೆಯ ಒತ್ತಡಕ್ಕೆ ಒಯ್ಯುವ ಈ ಸಿರಿತನ ಬೇಡವೆಂದೂ ನಾನು ಮೊದಲಿನಿಂದ ನಿನಗೆ ಹೇಳುತ್ತಲೇ ಇದ್ದೇನೆ. ಸುಖಪಡುವವರನ್ನೂ ನೋಡಿ ಸಂತೋಷಪಡುವ ಸ್ವಭಾವ ನಮಗೆ ಬಂದರೆ ಸಾಕು. ಆಗ ನಾವೂ ಎಲ್ಲರಿಗಿಂತಲೂ ಸುಖಿಗಳೇ. ಪರಹಿತ ಸಹಿಷ್ಣುತೆ ಇಲ್ಲದ ವಿದ್ಯೆ, ಸಂಪತ್ತು, ಸೌಂದರ್ಯ, ಯೌವನ ಇವೆಷ್ಟಿದ್ದರೂ ಅವು ಮಾನವನ ನೆಮ್ಮದಿಯ ದಾರಿಯಲ್ಲಿ ಕರುಳಿನ ಬೇನೆಯಂತೆಯೇ ಸರಿ ಎಂಬುದು ನನ್ನ ಸಿದ್ಧಾಂತ. ನೆಮ್ಮದಿ, ಸುಖ, ಸಂತೋಷಗಳ ಬಗ್ಗೆ ಹಲವರು ಹಲವಾರು ವಿಧದಲ್ಲಿ ವ್ಯಾಖ್ಯೆ ಬರೆದಿರುವರು. ಅವರೆಲ್ಲರೂ ದೊಡ್ಡ ಮನುಷ್ಯರೆ, ಅಪಾರ ಅನುಭವಿಗಳೇ! ಆದರೆ ಒಬ್ಬೊಬ್ಬರ ಅನುಭವ ಒಂದೊಂದು ಮುಖವಾಗಿದೆ. ಅವುಗಳಲ್ಲಿ ಆಯ್ದುಕೊಂಡು ನಾಲ್ಕೈದನ್ನು ಇಲ್ಲಿ ಬರೆದಿರುವೆನು. ಓದಿಕೊಂಡು ಅರಗಿಸಿಕೋ. ಅವುಗಳ ಸಾರವನ್ನು ಗ್ರಹಿಸು.

ಒಬ್ಬರನ್ನುವರು:—ತಾನು ಸುಖಿಯೆಂದು ತಿಳಿದುಕೊಂಡಿರುವನೊಬ್ಬನೇ ಜಗತ್ತಿನಲ್ಲಿ ಸುಖಿಯು.

ಇನ್ನೊಬ್ಬರು:—ನಮ್ಮಲ್ಲಿ ಸಂಪತ್ತು ಎಷ್ಟು ಇದೆ ಎಂಬುದು ನೆಮ್ಮದಿಯ ಅಳತೆಗೋಲಲ್ಲ. ನಾವೆಷ್ಟು ಅನುಭವಿಸುತ್ತಿರುವೆವು ಎಂಬುದೇ ಅದರ ಅಳತೆಯ ಗೋಲು.

ಮತ್ತೊಬ್ಬರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, "ಬುದ್ಧಿವಂತನಿಗೆ ಸುಖಿಯಾಗಿರಲು ಕೆಲವೇ ಸಂಪತ್ತು ಸಾಕು. ಅವಿವೇಕಿಗೆ

ಯಾವುದೂ ಎಷ್ಟಾದರೂ ಸುಖನೀಯುವುದಿಲ್ಲ. ಆದ್ದರಿಂದಲೇ ಮಾನವ ಜನಾಂಗದಲ್ಲಿ ಬಹು ಜನರು ದುಃಖಿಯಾಗಿರುವರು."ಯೆಂದು ಹೇಳಿರುವರು.

ನೆಮ್ಮದಿಯು ವ್ಯಕ್ತಿಯ ಅಭಿರುಚಿಯನ್ನು ಅವಲಂಬಿಸಿರುವದೇ ಹೊರತು ಅವನು ಹೊಂದಿರುವ ಸಾಧನ ಸಂಪತ್ತುಗಳನ್ನು ಹೊಂದಿಕೊಂಡಿ ರುವುದಿಲ್ಲವೆಂಬುದು ಇನ್ನೊಬ್ಬರ ಅನುಭವ.

ಸುಖಿಯಾಗಬೇಕೆಂದು ಸತತ ಸಂತಪಿಸಬೇಡ. ಅನೆಮ್ಮದಿ, ಅಸುಖ, ಬಂದರೆ, ಅದನ್ನು ಸ್ವಾಗತಿಸಲು ಹೆದರಬೇಡ. ಧೈರ್ಯವಾಗಿ ಸ್ವಾಗತಿಸು. ಇದೇ ನೀನು ಸುಖಿಯಾಗುವ ಸುಲಭ ಮಾರ್ಗವೆಂದು ಮತ್ತೊಬ್ಬ ಪಂಡಿತರು ತಮ್ಮ ಜೀವನ ರಸಾಯನವಿದೆಂದು ಹೇಳಿಕೊಂಡಿರುವರು.

ಪೂರ್ಣೀ, ನೋಡು ಇವುಗಳಲ್ಲಿ ಯಾವುದು ನಿನಗೆ ಸಮ್ಮತ? ಮಥಿಸು; ಚರ್ಚಿಸು. ಪತ್ರವನ್ನು ಮುಗಿಸುವ ಮೊದಲು ನಮ್ಮ ಜೀವನದ ದಾರಿ ಬುತ್ತಿಯಾದ ನೆನಹಿನ ಗಂಟನ್ನು ಸ್ವಲ್ಪ ಬಿಚ್ಚಿ ಚೂರನ್ನು ನಿನಗೆ ಉಣ ಬಡಿಸಲೆ? ಹೊ, ಹೋ! ಈಗ ಗೊತ್ತಾಯಿತು. ನಾನು ಈ ಮೊದಲು ಬರೆದ ಪತ್ರಗಳಲ್ಲಿ ನಿನ್ನ ಮತ್ತು ನನ್ನ ಜೀವನದ ಮೊದಲ ಹಾಳೆಗಳನ್ನು ಪ್ರಕಟಿಸಿದೆನೆಂದು ನಾಚಿಗೆಯೆ? ಈ ವಿಷಯಾಂತರಿಸಲು ಒಂದು ಪ್ರಶ್ನೆಯನ್ನು ಮುಂದೊಡ್ಡಿ ಬಿಟ್ಟೆ. ಇದು ಮೊದಲೇ ಅನ್ನಿಸಿದ್ದರೆ ನಿನ್ನ ಪ್ರಶ್ನೆಗೆ ಉತ್ತರ ಬರಿಯ ಪ್ರಶ್ನಾರ್ಥ ಚಿಹ್ನೆಯಷ್ಟೇ ಆಗುತ್ತಿತ್ತು. ಹೋಗಲಿ ನೀನು ಗೆದ್ದೆ, ನಾನು ಸೋತೆ.

ಅಗೋ, ಸೋಲು ಗೆಲವುಗಳ ಮಾತು ಬಂದಕೂಡಲೇ ನೆನಪಿಗೆ ಬರುತ್ತಿದೆ. ಅಂದಿನ ಆ ದಿನ. ವರುಷ ಉರುಳಿದರೇನು? ನೀನು ಮಾತ್ರ ನನ್ನನ್ನು ಉರುಳಿಸಿದ ದಿನ ನನ್ನ ನೆನಪಿನಿಂದ ಉರುಳದು. ನನ್ನ ಈ ಸೋಲು ನನ್ನ ಮನೆಯಲ್ಲೇ ಸಂಭವಿಸಿದ್ದರೆ ಮರೆತುಹೋಗುತ್ತಿತ್ತೇನೋ? ಅತ್ತೆಯ ಮನೆಯಲ್ಲಿ ನಾದಿನಿಯ ಎದುರಿನಲ್ಲಿ ನಡುಹಗಲಿನಲ್ಲಿ ನನ್ನ ಸೋಲು; ಮರೆಯಬಲ್ಲೆನೆ?

ಅವನು ನಿಮ್ಮೂರ ಕ್ಷೌರಿಕ! ನನಗೆ ಪರಿಚಯವಿದ್ದರೂ ನಿಮ್ಮ ಮನೆಯ ಅನ್ನದ ದಾಕ್ಷಿಣ್ಯ, ನಿಮ್ಮ ಹೊಲಗದ್ದೆಯ ರಾಗಿ ಭತ್ತದ ಋಣ ವಿದೆ ಅವನಿಗೆ. ಅವನು ಅಂದು ನಿನ್ನ ಮತ್ತು ನಿನ್ನ ತಂಗಿಯ ಮಾತನ್ನು ಕೇಳಿಬಿಟ್ಟನು. ಪಾಪ ಆ ಸಣ್ಣ ಹುಡುಗಿಗೇನು ಗೊತ್ತು? ಆಕೆಯನ್ನು ಮುಂದುಮಾಡಿ ನೀನು ಹಿಂದು ನಿಂತು ಅಂದು ಆಯುಷ್ಕರ್ಮವನ್ನು ನನಗೆ ಮಾಡಿಸಿಯೇ ಬಿಟ್ಟೆ.

ಅಪ್ಪನಿಗೆ ನನ್ನ ಜೋಟುದ್ದ ತಲೆಯ ಶಿಖಿಯನ್ನು ಕಂಡರೆಷ್ಟು ಸಮಾಧಾನವಿತ್ತು! ಆಚಾರವಿಚಾರಗಳ ಸ್ಫೂರ್ತಿ ಶಿಖಿ ಇದು ಎಂದು ಅವರು ತಿಳಿದಿದ್ದರು. ಅವರ ಆಜ್ಞೆಯಂತೆ ನಾನು ೨೦ ವರುಷ ಅದನ್ನು ಪೋಷಿಸಿಕೊಂಡು ಬಂದಿದ್ದೆನು. ನಿನಗಂತೂ ಮದುವೆಯಾಗುವ ಮೊದಲಿನಿಂದಲೇ ನನ್ನ ಜುಟ್ಟಿನ ಮೇಲೆ ಕಣ್ಣು ಇದ್ದಿತು. ಎಷ್ಟೋಸಾರಿ ನೀನು ಬೇಡಿಕೊಂಡೆ ನಾನು ಕೇಳಬೇಕಲ್ಲ. ಅಪ್ಪನ ಕಡೆ ಕೈ ಮಾಡಿ ಹೆದರಿಸಿದ್ದೆನು. ನೀನು ಅಪ್ಪನಿಗೆ ನನಗಿಂತಲೂ ಹೆಚ್ಚಿಗೆ ಹೆದರುತ್ತಿದ್ದುದರಿಂದ ಎರಡು ವರುಷ ಸುಮ್ಮನಿದ್ದೆ. ಕೊನೆಗೊಮ್ಮೆ ನಿನಗೆ ಧೈರ್ಯ ಬಂದಿತಲ್ಲಾ? ಅದೂ ನಿಮ್ಮ ಅಪ್ಪನ ಮನೆಯಲ್ಲಿ.

ನನಗಂದು ಆಯುಷ್ಕರ್ಮದ ಅವಸರವೇ ಇರಲಿಲ್ಲ. ಏನೋ ಮನೆಯ ಹತ್ತಿರ ಬಂದಿರುವನೆಂದೂ ಅವನಿಗೂ ನನ್ನ ತಲೆಯ ಮೇಲೆ ಕೈಯ್ಯಾಡಿಸಲು ಬಹಳ ಆಶೆ ಇದೆಯೆಂದೂ ನನಗೆ ಸಣ್ಣ ವಯಸ್ಸಿನಿಂದಲೂ ಆಯುಷ್ಕರ್ಮ ಮಾಡುತ್ತಿದ್ದ ಕುಳ್ಳ ಮಂಚನ ಮಗನಿವನೆಂದೂ, ಕಾಫಿಯನ್ನು ಕೊಡದೆ ಅದೂ ನಾನು ಹಾಸಿಗೆಯಿಂದ ಏಳುತ್ತಿರುವಾಗಲೇ ಉಪನ್ಯಾಸಕ್ಕೆ ಆರಂಭಿಸಿದೆ. ನನಗೇನು ಗೊತ್ತಾಗಬೇಕು? ನಿನ್ನ ಮಾತಿನ ಮಾಲೆಯಲ್ಲಿರುವ ಕೀಟಲೆ? ಇದಕ್ಕೇಕೆ ಇಷ್ಟು ಮೇಲುಸಿರು ಬಿಡುವೆ ಎಂದು ಹೇಳಿ ಒಪ್ಪಿಕೊಂಡೆನು. ನಂದಿನಿ ನಗುತ್ತಲೇ ಮಣೆಹಾಕಿದಳು, ಸಡಗರದಿಂದ ಬಿಸಿನೀರು ಎಲ್ಲವನ್ನೂ ತಂದಿಟ್ಟಳು.

ಸಾಂಪ್ರದಾಯಕವಾಗಿ ಮುಖವೋ ತಲೆಯೋ ಎಂದು ಕೇಳುವ ಮಾತನ್ನು ಆತ ಎತ್ತದೆ ತಲೆಗೇ ಕೈ ಹಚ್ಚಿದನು. ತಲೆಬಗ್ಗಿಸಿದೆ. ನನ್ನ

ಹುಟ್ಟು ಗುಣ ನನ್ನನ್ನು ಅಲ್ಲಿ ಕಾಡಿಸಿಬಿಟ್ಟಿತು. ನಿನಗೆ ಗೊತ್ತಿರುವಂತೆ ನಾನು ತಲೆ ತಗ್ಗಿಸಿದಾಗ ದೃಷ್ಟಿ, ಮನಸ್ಸು, ವಿಚಾರ ಇವುಗಳ ಸಮ್ಮಿಲನದಲ್ಲಿ ಸೇರಿ ಹೋಗುವೆನು, ಅಂದು ಆವುದೋ ವಿಚಾರದ ಝುರಿ ಆ ನಾಪಿತನ ಮುಂದೆ ತಲೆ ಬಗ್ಗಿಸಿದಾಗ ಬಂದು ಬಿಟ್ಟಿತು. ಝುರಿಯಿಂದ ಎಚ್ಚರಿಕೆ ಯಾಗುವ ಹೊತ್ತಿಗೆ ಆ ಕುಳ್ಳಮುಂಚನ ಮಗನು ಎಲ್ಲವನ್ನೂ ಪೂರೈಸಿದ್ದನು.

ನಾನು ಸ್ನಾನದ ಮನೆಗೆ ಬಂದು ನಿನ್ನನ್ನು ಕೂಗಿಕೊಂಡಾಗಲೇ ನನಗೆ ಎಚ್ಚರ. ಎಂದೂ ಸ್ನಾನದ ಮನೆಗೆ ನೀನೇ ಬರುವವಳು, ಅಂದು ನಂದಿನಿ ಬಂದಳು. ತಲೆಗೆ ನೀರು ಹಾಕಿ ಸೀಗೆಯ ಪುಡಿಯನ್ನು ಹಾಕಿ ದಳು. ತಲೆಯುಜ್ಜುವೆನೆಂದು ತಲೆಯ ಮೇಲೆ ಕೈಯಾಡಿಸಿದೆನು. ಏನೂ ತಡವರಿಸಲಿಲ್ಲ, ಗಾಬರಿಯಾಯಿತು. ಹಿಂದಲೆ-ಮುಂದಲೆಯನ್ನು ಸವರಿ ನೋಡಿದೆನು. ನಂದಿನಿಯೂ ಮಾಯವಾಗಿದ್ದಳು. ತಲೆಯ ತುಂಬ ಬಿಸಿ ನೀರನ್ನು ಬಸಿದುಕೊಂಡು ನಾನು ಸಿಟ್ಟಿನಿಂದೇಕೆ ಅಳುವ ಧ್ವನಿಯಲ್ಲಿ (ಅಳ ಲಿಲ್ಲ) ಹೊರಗೆಬಂದೆನು. ನೀನು ಸಿಕ್ಕಲಿಲ್ಲ. ಅಕ್ಕ (ನಿಮ್ಮತಾಯಿ) ನು ಅಂದು ಕಾಫಿಯನ್ನು ತಂದುಕೊಟ್ಟಳು. ನೀನು ಅಂದು ಕಾಫಿ ತಂದಿದ್ದರೆ ನಿನ್ನ ಗ್ರಹಚಾರ ಕೂಡಿ ಬಂದಿರುತ್ತಿತ್ತು. ಹುಡಿಕಿದೆನು. ನೀನು ನಿನ್ನ ತಂಗಿ ಇಬ್ಬರೂ ಮಾವನವರ ಮಾವಿನ ತೋಟಕ್ಕೆ ಹೋಗಿಬಿಟ್ಟಿದ್ದಿರಿ. ನಾನು ತಲೆಯ ತುಂಬ ಟೊಪ್ಪಿಗೆಯನ್ನು ಹಾಕಿಕೊಂಡು ಊರ ಹೊರಗೆ ಅಡ್ಡಾಡಿ ಹೊತ್ತಾಗಿ ಬಂದೆನು. ಬರುವ ಹೊತ್ತಿಗೆ ಮಾವನವರು ಮಾಳಿಗಾಗಿ ಕಾದಿ ದ್ದರು. ರಾತ್ರಿ ಹತ್ತಾಯಿತು. ಊಟವನ್ನು ಅಂದು ಅಕ್ಕನೇ ಬಡಿಸಿದಳು. ನಿನ್ನ ಸುಳಿವೇ ಇಲ್ಲ. ನಂದನಿಯನ್ನು ಕೇಳಲು ನಾಚಿಗೆ. ಊಟವಾಯಿತು. ಮಂಚದ ಮನೆಗೆ ಹೋದೆ ಅಲ್ಲಿ ನಿನ್ನ ಹಾಸಿಗೆಯೂ ಮಾಯವಾಗಿದ್ದಿತು. ಸಿಟ್ಟು ಎರಡುಪಟ್ಟಾಯಿತು. ಶಿಖೆಯನ್ನು ಕಳೆದುಕೊಂಡ ಅವಮಾನ. ಸಿಟ್ಟುತೀರಿಸಿಕೊಳ್ಳಲು ನೀನು ಸಿಗದಿದ್ದೂ ಎಲ್ಲವೂ ಸೇರಿ ರಾತ್ರಿಯನ್ನು ಹಗಲಾಗಿ ಕಳೆದು ಬೆಳಗ್ಗೆ ಏಳುವ ಹೊತ್ತಿಗೆ ಸ್ನಾನದ ಮನೆಗೆ ಹೋಗುವ ಹೊತ್ತಿಗೆ ನನ್ನ ಕಚೇರಿಯಿಂದ ನಾನು ಕೂಡಲೇ ಹೊರಟು ಬರುವಂತೆ ತಾರು ಬಂದಿತ್ತು. ಬಂದು ಎರಡು ದಿನಗಳಾಗಿರಲಿಲ್ಲ. ಒಂದು ದಿನದ

ತ್ಯೈರಾಣ ಇಂತಾಯಿತು. ಈಗ ಹೋಗುವದೆಂದರೆ ಯಾರಿಗೆ ಕಾಲು ಬರ ಬೇಕು. ಹೋಗದಿದ್ದರೆ, ನಿನ್ನ ಕಡೆ ದೈನ್ಯದಿಂದ ನಾನು ತಿರುಗಿ ನೋಡಿದಾಗ ನಿನಗೂ ಕೆಟ್ಟನಿಸಿರಬಹುದಲ್ಲವೆ?

ಇದಾದ ಆರು ತಿಂಗಳನಂತರ ಅಪ್ಪನು ನನ್ನ ಮುಖವನ್ನು ನೋಡುವುದಿಲ್ಲವೆಂದು ಹಠಹಿಡಿದು ಅದನ್ನು ಬಿಟ್ಟಬಳಿಕ,ಒಂದು ದಿನ ನೀನು ನನ್ನ ತಲೆಯ ಕೂದಲ ಉದ್ದವನ್ನು ಅಳೆಯುತ್ತ ಎಣ್ಣೆಹಾಕಿ ಅವುಗಳನ್ನು ಸಂತೈಸುತ್ತಿರುವಾಗ, ಆಗ ಸಣ್ಣ ದನಿಯಲ್ಲಿ ಸೋಲು ಯಾರದು? ಎಂದು ಕೇಳಿದಾಗ ನಾನು ಕೊಟ್ಟ ಉತ್ತರ ನಿನಗದೆಷ್ಟು ಮೆಚ್ಚಿಗೆಯಾಯಿತು. ಸೋಲುವುದೇ ಸರಿ—ಸುದತಿಗೆಇದು ತಾಂ ಸತಿವ್ರತಾ, ಎಂದು ನಾನು ಹೇಳಿದಾಗ, ನೆಲಕ್ಕೆ ಬಿದ್ದರೂ, ಮೀಸೆ ಮಣ್ಣಾಗಲಿಲ್ಲವೆನ್ನುವ ಗಂಡಸರು ನೀವಲ್ಲವೇ ಎಂದು ಸೋಲಿನ ಮೇಲೆ ನಿನ್ನ ಗೆಲವನ್ನು ಸ್ಥಾಪಿಸಿಕೊಂಡೆ.

ನಿನ್ನ ಉತ್ತರವನ್ನು ಎದುರು ನೋಡುತ್ತಿರುವ
**ನಿನ್ನವನೇ,**

## [೬]

**ಪ್ರಿಯೆ, ಪ್ರಿಯದರ್ಶಿನಿ,**

ನಾನು ನಿನ್ನ ಪತ್ರಗಳಿಂದ ನಿರೀಕ್ಷಿಸುತ್ತಿರುವುದು ಸಮಸ್ಯೆಯ ಮೇಲೆ ಸಮಸ್ಯೆಗಳನ್ನಲ್ಲ. ನಿಜವಾದ ಸುಖದ ವ್ಯಾಖ್ಯೆಯನ್ನು ಕೇಳಿ ಅದಕ್ಕೆ ಉತ್ತರ ಪಡೆದ ಮರು ಪತ್ರದಲ್ಲೇ ಮತ್ತೊಂದು ಮಹಾಸಮಸ್ಯೆಯನ್ನು ನನ್ನ ಮುಂದೆ ತಂದೊಡ್ಡಿರುವಿ. ಇದಂತೂ ಬಿಡಿಸಲಾಗದ, ಆದರೆ ಬಿಡಿಸಲೇ ಬೇಕಾದ ಸಮಸ್ಯೆಯಾಗಿದೆ.

ನಿಜ! ನಾನು ಹೋದಸಾರಿ ಬಂದಾಗಲೇ ತೀರ್ಥಾನಂದರು ಬಂದಿದ್ದರು. ಅವರು ನನ್ನ ಮುಖ ನೋಡಿದ ಕೂಡಲೇ ನಿಸ್ತೇಜರಾಗಿ ತುಟಿ ಒಣಗಿಸಿದರು. ಆಡುವ ಮಾತು ಹಿಡಿ ಹಿಡಿದು ಆಡುವಂತಿದ್ದಿತು. ಇವರು ನನ್ನೆದುರಿನಲ್ಲಿ ಹೀಗೆ ಉಗುಳು ನುಂಗಿ ಮಾತಾಡುತ್ತಿದ್ದುದನ್ನು ಅವರ ನನ್ನ

ಹತ್ತು ವರುಷಗಳ ಪರಿಚಯವಲ್ಲ ಆಗಲೇ ಮೊದಲು. ನಾನು ಕಾರಣವನ್ನು ಊಹಿಸಲಾಗಲಿಲ್ಲ. ಆದರೂ ಇವರನ್ನು ಸಂಶಯ ದೃಷ್ಟಿಯಿಂದ ನೋಡುವ ಧೈರ್ಯ ಬರಲಿಲ್ಲ.

ಎಂತು ಬರಬೇಕು ಹೇಳಿ? ಅಮ್ಮ ಇದ್ದಾಗಿನಿಂದಲೂ ಮನೆಗೆ ಬಂದು ಹೋಗುತ್ತಿದ್ದರು. ಅಮ್ಮನ ಕೈಯ ಊಟ ಇವರಿಗೆ ಬಲು ರುಚಿಯಂತೆ! ಉತ್ತರ ದೇಶದಿಂದ ಇವರು ಬೆಂಗಳೂರಿಗೆ ಬಂದು ಇಪ್ಪತ್ತು ವರುಷಗಳಿಗೇನು ಕಡಿಮೆ ಇಲ್ಲ. ಸಾಧುಸಂತರೆಂದರೆ ತನುಮನಧನಗಳನ್ನು ಧಾರೆಯೆರೆಯುತ್ತಿದ್ದ ಕಾಲವದು. ರಸಕವಳ, ಮೇಲೆ ಪಾದಗಾಣಿಕೆ, ಇವುಗಳಿಂದ ಬೊಜ್ಜು ಬೆಳೆಸುತ್ತ ರಕ್ತದ ಕಾಂತಿಯಿಂದ ಹೊಳೆವ ಮುಖವನ್ನೇ ಬ್ರಹ್ಮತೇಜಸ್ಸೆಂದು ತಿಳಿದುಕೊಂಡು ಅಡಿಗಡಿಗೆ ಶರಣು ಎನ್ನುತ್ತಿದ್ದ ಆ ಕಾಲದಲ್ಲೇ ಈ ಸ್ವಾಮಿಗಳು ಬಂದರು. ಹಿಂದಿಯೊಂದರ ಹೊರತು ಇವರಿಗೆ ಮತ್ತಾವ ಭಾಷೆ ಬರುತ್ತಿದ್ದಿಲ್ಲ. ಇತ್ತೀಚೆಗೆ ಕನ್ನಡವನ್ನು ಕಲಿತುಕೊಂಡಿರುವರು. ತಾವು ಊಟಕ್ಕೆ ಹೋಗುವ ಭಕ್ತರ ಮನೆಯಲ್ಲಿ ಅವರೊಂದಿಗೆ ಮಾತನಾಡುವಷ್ಟು ಕನ್ನಡ ಮಾತ್ರ ಇವರಿಗೆ ಬರುತ್ತಿದೆ.

ಊರಿಂದೂರಿಗೆ ತಿರುಗುವ ಸನ್ಯಾಸಿಗಳಾಗದೆ ಇವರು ಬೆಂಗಳೂರಲ್ಲಿಯೇ ಕಾಲೂರಿನಿಂತರು. ಬೆಂಗಳೂರಿನ ಲಾಲಬಾಗಿನ ಹವ ಇವರಿಗೆ ಒಗ್ಗಿತು. ಊಟ ಉಪಚಾರ ಇವು ಇವರನ್ನು ಬಿಡಲಿಲ್ಲ. ವಯಸ್ಸಿನ ಆಟ ಇವರ ರಸದೇಹದ ಮೇಲೆ ಏನೂ ಆಗಲಿಲ್ಲ. ವಯಸ್ಸು ಕಳೆದಂತೆ ಇವರು ತರುಣರಾಗುತ್ತಿರುವರು. ಚಿಂತೆಯಿಲ್ಲದೆ ದುಡಿಮೆ ಇಲ್ಲದೆ, ಬೆಳೆದ ದೇಹವದು. ಕರಗುವುದೆಂತು?

ನಮ್ಮ ಮನೆಗೆ ಹೊಸಬರಲ್ಲದ ಈ ಸ್ವಾಮಿಗಳಿಗೆ ಈಗ ಈ ಹೊಸ ದೃಷ್ಟಿ ಬಂದಿತೇಕೆ? ಹೊಸಮಾತು ಕತೆಗಳು ಬಂದಿರುವುದೇಕೆ? “ಪಾರಮಾರ್ಥಿಕ ವಿಚಾರದ ಮಾತೊಂದೂ ಇಲ್ಲ. ನವ ತರುಣನ ಆಶಾ ಜ್ಯೋತಿಯ ಪಡಿಯಂತಹ ಮಾತುಗಳು ಈ ಸಾಧುವಿನ ಬಾಯಲ್ಲಿ! ನಮ್ಮ ಮನೆಗೆ

ಬರಬೇಡಿ ಎನ್ನುವ ತುದಿನಾಲಿಗೆಯಲ್ಲಿದ್ದೇನೆ ಹೇಳಿಬಿಡಲೇ" ಎಂದು ನೀನು ಪತ್ರದಲ್ಲಿ ಬರೆದಿರುವೆ. ಇದಕ್ಕೆ ನನ್ನಿಂದ ಉತ್ತರವನ್ನು ನೀನು ಆಶಿಸಿರುವಿ.

ಹುಚ್ಚಿಯಲ್ಲವೇ ನೀನು? ಏಕಾಕಿನಿಯಾಗಿರುವ ನೀನು ಹೀಗೆ ಮುಚ್ಚುಮರೆಯಿಲ್ಲದೆ ಬರೆದು ಬಿಟ್ಟರೆ ಓದುವ ನನಗೆ ಸಿಟ್ಟುಬಂದೀತು, ಸಂದೇಹ ಬಂದೀತು, ಮನಸ್ಸು ತಳಮಳಗೊಂಡೀತು; ಓಡಿಬಂದು ಆ ಬಡ ಸನ್ಯಾಸಿಯು ಕೆನ್ನೆಗೆ ಎರಡು ಬಿಗಿದಾರು ಎಂದು ಊಹಿಸಬಾರದೆ?

ಆದರೆ ನೀನು ಹುಚ್ಚಿಯಲ್ಲ, ಜಾಣೆ. ನಾನು ನಿನ್ನನ್ನು ಸಂದೇಹಿಸುವುದಿಲ್ಲವೆಂಬ ಮರ್ಮವನ್ನು ಅರ್ಥಮಾಡಿಕೊಂಡಿರುವಿ. ಆದರೂ ನಾನೊಮ್ಮೆ ನಿನ್ನನ್ನು ಪರೀಕ್ಷಿಸಲು ನಾನೊಬ್ಬನೇ ಇದ್ದಾಗ, ಒಬ್ಬ ನವ ತರುಣಿ ಬಂದಿದ್ದಳು. ಆಕೆ ಬಹಳ ಹೊತ್ತು ಮಾತನಾಡಿದಳು. ನೋಡಲು ಬಹು ಸುಂದರಿಯಾಗಿದ್ದಳು. ವಯಸ್ಸು ನಿನಗಿಂತ ಕಡಿಮೆ ಎಂದು ಇಷ್ಟು ಬರೆದರೆ ಸಾಕು ಮುನಿಸು ಹುಟ್ಟಿನ ಮೂಡೆಯಾಗಿ ಅತ್ತುನೀಯು ಪತ್ರ ಬರೆಯುವುದನ್ನೇ ನಿಲ್ಲಿಸಿ ಬಿಡುತ್ತಿದ್ದೆ. ಆದರೆ ನಾನೀಗ ಸ್ವಲ್ಪವೂ ಚಲಿತನಾಗಿಲ್ಲ. ಸಂದೇಹ, ಗಾಬರಿ ಇವಾವೂ ನನ್ನ ತಲೆಗೂ ಸುಳಿದಿಲ್ಲ.

ಅದಿರಲಿ, ನಿನ್ನ ಪ್ರಶ್ನೆಗೆ ಉತ್ತರವೇನೆಂದು ಬರೆಯಲಿ! ಯೋಚಿಸಿ ಉತ್ತರ ಕೊಡಬೇಕಾದ ಸಮಸ್ಯೆ ಇದು. ಆದರೆ ಒಂದು ಮುತ್ತಿನಂತಹ ಮಾತನ್ನು ನಿನ್ನ ಗಮನಕ್ಕೆ ತಂದು ಈ ಪತ್ರವನ್ನು ಬೆಳಸದೆ ಮುಗಿಸುವೆನು. ವಿಕ್ಟರ್ ಹ್ಯೂಗೋ ಎಂಬುವರು ಸ್ತ್ರೀಯರ ಬಗ್ಗೆ ಹೇಳಿರುವ ಮಾತು ಅದೆಷ್ಟು ಸೊಗಸಾಗಿದೆ ನೋಡು. "Men have sight; Women have insight" ಅಂದರೆ ಪುರುಷರಿಗೆ ದೃಷ್ಟಿ ಇದ್ದರೆ, ಸ್ತ್ರೀಯರಿಗೆ ಅಂತರದೃಷ್ಟಿ ಇರುವುದು. ಆದ್ದರಿಂದ ನೀನು ನಿನ್ನ ಅಂತರದೃಷ್ಟಿಯಲ್ಲಿ ಈ ಸನ್ಯಾಸಿಯ ದೃಷ್ಟಿಯಲ್ಲಿರುವುದೇನೆಂಬುದನ್ನು ಗ್ರಹಿಸು. ನಿಧಾನವಾಗಿ, ಶಾಂತವಾಗಿ, ಗಾಬರಿಯಾಗದೆ ಗ್ರಹಿಸು. ಹೇಗೆ ಗ್ರಹಿಸಬೇಕೆಂಬ ಕಲೆಯನ್ನು ನಿನಗೆ ಕಲಿಸಬೇಕಾಗಿಲ್ಲ. ಒಂದು ವೇಳೆ ಈ ಕೊಬ್ಬಿದ ಕಾವಿಯ ಬ್ರಹ್ಮಚಾರಿಯ ಕಣ್ಣಿನಲ್ಲಿ ಕಾಮದ ಕೀಟವಿದ್ದರೆ, ಲೋಕ ಕಲ್ಯಾಣ

ವಾಗುವಂತಹ ಒಂದು ಕೆಲಸವನ್ನು ಮಾಡು. ಇವರಂತಹ ಕಾವಿಯ ವೇಷದ ಕಾಮುಕರೆಲ್ಲರೂ ಬುದ್ಧಿ ಕಲಿತುಕೊಳ್ಳುವಂತೆ ಮಾಡು. ಇನ್ನೊಮ್ಮೆ ಈ ಸ್ವಾಮಿಗಳು ಬಂದಾಗ ಒಳ್ಳೆಯ ಉಪಹಾರ ಮಾಡಿಕೊಡು. ತಂಪಾದ ಹಣ್ಣನ್ನು ಸುಲಿದು ಕೊಡು. ಜೊತೆಗೆ ಒಲೆಯಲ್ಲಿ ಕಬ್ಬಿಣದ ಸಟ್ಟುಗ ಚೆನ್ನಾಗಿ ಕಾಯುತ್ತಿರಲಿ. ಪಕ್ಕದ ಮನೆಯ ಹೆಣ್ಣು ಮಕ್ಕಳನ್ನು ಕರೆದು ಕುಳ್ಳಿರಿಸಿಕೋ. ಅವರ ಎದುರಿನಲ್ಲೇ ಕೆಂಪಗೆ ಕಾಸಿದ ಸೌಟನ್ನು ತಂದು ಹಣ್ಣನ್ನು ಚಪ್ಪರಿಸುತ್ತಿರುವ ತುಟಿಯ ಮೇಲೆ ಇಡು. ಹೆಣ್ಣಿನ ಅನು ವನ್ನು ಚಪ್ಪರಿಸುವ ಬ್ರಹ್ಮಚಾರಿಯ ತುಟಿಗೆ ಹಾಕುವ ಮಾರುತಿ ಮುದ್ರೆ ಇದೆಂದು ಹೇಳುತ್ತಲೇ ಹಾಕಿಬಿಡು. ಭಯ ಪಡಬೇಡ. ಸುಟ್ಟು ಮೋರೆ ಯನ್ನು ಹೊಂದಿದ ಸನ್ಯಾಸಿಗೆ ನಂತರ ಸುಡುಗಾಡೇ ಗತಿ. ಈ ವಿಷಯವು ಜನಜನಿತವಾದರಾಗಲಿ ಭಯ ಪಡಬೇಡ, ನಿನ್ನ ಶೀಲದ ಕಾವಲಿಗೆ ನನ್ನ ಪ್ರೇಮದ ಏಳು ಸುತ್ತಿನ ಕೋಟೆ ಇರುವವರೆಗೆ ಅದಕ್ಕಾವ ಚ್ಯುತಿಯೂ ಇಲ್ಲ.

ಈ ಸನ್ಯಾಸಿಯನ್ನು ಅಗ್ನಿ ಪರೀಕ್ಷೆಗೊಡ್ಡುವ ಮೊದಲು, ಇನ್ನೊಂದು ಅವಕಾಶ ಕೊಟ್ಟು ನೋಡು. ಪೂಜ್ಯರೆಂಬ ಪುರಸ್ಕಾರದ ಬದಲು ಅಯೋ ಗ್ಯರೆಂಬ ತಿರಸ್ಕಾರದ ದೃಷ್ಟಿಯನ್ನು ಬೀರಿದರೂ, ಅದನ್ನು ಅರ್ಥಮಾಡಿ ಕೊಳ್ಳದಿದ್ದರೆ ಮೇಲೆ ಹೇಳಿದಂತೆ ಶಾಸ್ತಿಯನ್ನು ಮಾಡಿಬಿಡು.

**ಇತಿ ನಿನ್ನ ಪತಿ.**

## [ ೭ ]

**ಪೂರ್ಣೀ,**

ನಾನು ನಿನಗೆ ತಿಳಿಸದೆ, ನನ್ನ ವಿಷಯವಾಗಿಯೇ ನೀನು ನಿನ್ನ ಚಿನ್ನ **ತಂಗಿ ಆಶಾಳೊಂದಿಗೆ ಮಾತನಾಡುತ್ತಿರುವಾಗಲೇ ನಾನು ಇಳಿದು ಬಂದು ನಿನ್ನ ಮುಂದೆ ಸಾಕ್ಷಾತ್ಕಾರವಾದುದು ನಿನಗೆ ಆಶ್ಚರ್ಯ–ಸಂತೋಷ ಇವೆರ ಡನ್ನು ಒಮ್ಮೆಲೆ ತುಂಬಿ ತೀವಿತಲ್ಲವೆ? ಬನ್ನಿ, ಕುಳಿತುಕೊಳ್ಳಿ ಯಾವಾಗ**

ಬಂದಿರಿ, ಎಂಬ ಅನುನಯದ ಕ್ಷೇಮ ಸಮಾಚಾರವೇ ಬೇಡವೇ? ಕುಶಲ ಪ್ರಶ್ನೆಯನ್ನು ಮಾಡಲಿಲ್ಲವೇಕೆ? ಮೂಕಿಯಂತೆ ಮೌನವಾಗಿ, ನನ್ನನ್ನೇ ನುಂಗುವ ದೃಷ್ಟಿಯಿಂದ ನೋಡುತ್ತಿದ್ದೆ. ಕಕ್ಕಾಬಿಕ್ಕಿಯಾಗಿ ನಿಂತ ತನ್ನ ಅಕ್ಕನನ್ನು ನೋಡಿ ಆಶಳಿಗೆ ನಗು ಬಂದರೂ, ತಡೆ, ಹಿಡಿದುಕೊಂಡು ನನ್ನ ಕಾಲಿಗೆ ನೀರು ಕೊಟ್ಟಳು. ಅಷ್ಟರೊಳಗಾಗಿ ನಿನ್ನ ತೊಡೆಯ ಪಕ್ಕ ದಲ್ಲಿ ತನ್ನ ಕೆಲಸದಲ್ಲೇ ನಿಮಗ್ನನಾಗಿದ್ದ ರಾಘು ನನ್ನ ಗುರುತು ಹಿಡಿದು ಕೊಂಡನು. ಅಪ್ಪಾ ಎಂದು ಯಾರು ಹೇಳಿಕೊಟ್ಟಿದ್ದರೋ ಅದನ್ನು ಪೂರ್ಣ ಉಚ್ಚರಿಸಲಾರದೆ ತನ್ನ ಬಲವನ್ನೆಲ್ಲಾ ಬಿಟ್ಟು 'ಪ್ಪಾ' ಎಂಬ ಶಬ್ದ ವೊಂದನ್ನೇ ಉಚ್ಚರಿಸಿದನು. ಪಾಪ, ಒಂದು ವರುಷ ತುಂಬಿದ ಪುಟ್ಟ ಬಾಯಿಗೆ, ಎರಡನೇ ವರುಷದ ವರ್ಧಂತಿ ಇನ್ನೂ ದೂರವಿರುವ ಆ ಹಾಲು ಜೊಲ್ಲಿಗೆ ಎರಡು ಶಬ್ದಗಳನ್ನು ಉಚ್ಚರಿಸುವುದೇ ಕಷ್ಟವಾಗಿರಬಹುದು. ಶಬ್ದ ಕಡಿಮೆಯಾದರೂ, ಆ ಕಪ್ಪುಕಣ್ಣುಗಳಲ್ಲಿ ಅಲುಗುವ ತುಟಿ ಕುಣಿಯುವ ಗದ್ದ, ಇವುಗಳಲ್ಲಿ ತುಂಬಿ ತುಂಬಿ ಬರುತ್ತಿರುವ ಪ್ರೀತಿಗೇನು ಕಡಿಮೆ ಇರಲಿಲ್ಲ. ಬುಳ ಬುಳನೆ ನಾಲ್ಕು ಕಾಲಗಳಲ್ಲಿ ನಡೆದು ಬಂದ ರಘು ವನ್ನು ನಾನು ಎತ್ತಿಕೊಂಡು ಮುತ್ತಿಡುವ ಮೊದಲೇ, "ಕಾಲುತೊಳೆದುಕೊಳ್ಳ ಬಾರದೆ? ಮಗು ಓಡಿ ಹೋಗುವುದೇ ಅಷ್ಟು ಪ್ರೀತಿ ಇದ್ದರೆ ಆರುತಿಂಗಳ ಇತ್ತ ತಿರುಗಿಯೂ ಸಹ ನೋಡಲಿಲ್ಲವೇಕೆ" ಎಂದು ನಿನ್ನ ವಕೀಲಿಯನ್ನು ವಹಿಸಿಕೊಂಡು, ಮುಂದೆ ಬಂದ ಮಾತಾಡಿದ ಆಶಳ ಕೆನ್ನೆ ಚಿವುಟು ವಂತಾಯಿತು. ಆದರೆ ರಸದಾಳಿಯ ಕಬ್ಬಿನಂತೆ ಬೆಳೆದು ನಿಂತ ಹುಡುಗಿ, ಲಾವಣ್ಯದ ಲಲ್ಲೆ ಗಲ್ಲದ ಮೇಲೆ ನಿಂತು 'ನಾನಿಲ್ಲಿ' ಎಂದು ಕೂಗಿ ಹೇಳು ತ್ತಿರುವ ಅರಳುತ್ತಿರುವ ಆ ಮುಖ,ಆದರೂ ನಿನ್ನಷ್ಟೇ ಗಡುಸುತನದ ಮೂಗು. ಇವುಗಳೆಲ್ಲವನ್ನೂ ನೋಡಿದಾಗ ಆಕೆಯನ್ನು ಮುಟ್ಟುವ ಧೈರ್ಯ, ಸಲಿಗೆ, ಎಲ್ಲಕ್ಕೂ ಬೇಡಿಬಿದ್ದಿತು. ನಿನ್ನ ಕಡೆಗೆ ತಿರುಗಿದೆ. ನಿನ್ನ ಮುಖದಲ್ಲಿ ಅದೇಕೋ ಮೊದಲಬಾರಿ ಅತ್ತೆಯ ಮನೆಗೆ ಬಂದ ಅಳಿಯನನ್ನು ಅತ್ತೆಯ ಮಗಳು ಬಾಗಿಲ ಹಿಂದೆ ನಿಂತು ಕದ್ದುನೋಡುವ ಹೊಸಲಜ್ಜೆ ಬಂದಿ ದ್ದಿತು. ಅಲ್ಲವೇ ಪೂರ್ಣೀ, ಆರು ತಿಂಗಳ ನಂತರ ನನ್ನನ್ನು ನೋಡುವ ನೋಟದಲ್ಲಿ ಎಂತಹ ಹೊಸತನವನ್ನು ಕಂಡುಕೊಂಡಿರುವಿ. ಅದು

ತಾನಾಗಿ ಬಂದುದೋ, ನೀನಾಗಿ ಅಳವಡಿಸಿಕೊಂಡುದೋ? ನನಗಂತೂ ಮಂತ್ರ್ಮುಗ್ಧ ಕತ್ತೆತ್ತಿ ನೋಡುವಂತಿದ್ದಿತು. ನಿನ್ನ ಪುಣ್ಯಕ್ಕೆ ನೀನೊಬ್ಬಳೇ ಅಲ್ಲಿರಲಿಲ್ಲ. ಸಂಜೆ, ಪೂರ್ಣ ಸಂಜೆಯಾಗಿ ರಾತ್ರಿಯಾಗುತ್ತಲೇ ಬಂದಿತ್ತು. ಮುಂಜಾನೆ, ಮುಸುಕು ಹರಿಯುವ ಮುನ್ನ ರೈಲಿನಲ್ಲಿ ಕುಳಿತು ಹದಿನೈದು ತಾಸು "ಎಕ್ಸ್‌ಪ್ರೆಸ್" ಪ್ರಯಾಣ ಮಾಡಿ ರೈಲಿನ ವೇಗಕ್ಕಿಂತ ವೇಗವಾಗಿ ಓಡಿಬಂದ ದಣಿವು ಬಾಗಿಲಿಗೆ ಬರುತ್ತಲೇ ಆರಿಹೋಯಿತು. ಆದರೆ ನೀನು ಮಾತ್ರ ನನಗೆ ದೃಷ್ಟಿತಾಗುವಂತೆ ನೋಡಿದೆ, ಏಕೆ? ಅದೇ ದೂಳು ಕುಳಿತ ಬಿಳಿಯ ಜುಬ್ಬ. ಬಾಚಲು ಹೋದರೆ ಬಗ್ಗದ ಪುಡಿಗೂದಲಿನ ತಲೆ, ಪುಟ್ಟ ಸೊಂಟ, ಚಿಕ್ಕ ಕಾಲುಗಳು ಹೊರಲಾರದ ದೊಡ್ಡ ಹೊಟ್ಟೆ. ಇವಿಷ್ಟೂ ಇದ್ದಂತೆಯೇ ಇದ್ದರೂ ನಾನು, ನಿನಗದೆಷ್ಟು ಹೊಸದಾಗಿ ಕಂಡೆನು, ಈಗ ಗೊತ್ತಾಯಿತೆ? ನೋಡುವ ದೃಷ್ಟಿಯಲ್ಲಿ ಹೊಸತು ಹಳತು ಸೊಗಸು, ಸಂಕಟಗಳು ಅಡಗಿರುವುದೆಂಬುದು. ಸೃಷ್ಟಿಯ ರಹಸ್ಯವನ್ನೆಲ್ಲಾ ಈ ದೃಷ್ಟಿಯಲ್ಲಿ ಅಡಗಿಸಲಾಗಿದೆ. ಮುಪ್ಪು, ಯೌವನ, ಕುರೂಪ, ಸುರೂಪ ಇವುಗಳು ದೇಹಕ್ಕೆ ಬಂದರೆ, ದೃಷ್ಟಿಗೆ ಮಾತ್ರ ಇದಾವುದೂ ಅಲ್ಲ. ಈ ನೋಟವನ್ನೇ ಕವಿಯ ಮಾತಿನಲ್ಲಿ ಜೀವನದ, ಬೆಳಕಿನ ಕಿಡಿ ಎಂದು ಕರೆಯುವುದು.

ಬಹು ಕೆಟ್ಟ ನೋಟ ನಿನ್ನದು. ಅಂದು ನನಗೆ ಊಟವೇ ಸೇರಲಿಲ್ಲ. ಗಂಟಲಿನಲ್ಲಿ ಅನ್ನವೇ ಇಳಿಯಲಿಲ್ಲ. ಕಾಯಿ ಪಲ್ಲೆಗಳಿಗೆ ಅದಕ್ಕೆ ಹಾಕಿದ್ದ ಉಪ್ಪು ಹುಳಿ ಹಿಡಿದಿದ್ದರೂ ನನ್ನ ನಾಲಿಗೆಗೆ ಹಿಡಿಸಲಿಲ್ಲ. ಊಟದ ಶಾಸ್ತ್ರ ಮಾಡಿದೆನು. ನೀನು ಊಟ ಮಾಡಿದೆಯೋ ಇಲ್ಲವೋ ಅದನ್ನು ವಿಚಾರಿಸಲಿಲ್ಲ. ನನ್ನ ಅವಸರ ನನ್ನ ಈ ಊಟಸೇರದಿರುವಿಕೆ ಇವೆಲ್ಲವು ವನ್ನೂ ಅರ್ಥಮಾಡಿಕೊಂಡಿದ್ದ ನೀನು, ಬಾಯಿಯಿಂದ ಹೊರಬರದ ನಗು ವನ್ನೇ ನಗುತ್ತಿದ್ದೆಯಲ್ಲವೆ?

ಬೆಂಗಳೂರಿನ ಬಾಡಿಗೆಯ ಮನೆಯ ಸುಖ ಅನುಭವಿಸಿದವರಿಗೇ ಗೊತ್ತು. ಉದ್ಯಮದ ಕೇಂದ್ರೀಕರಣದಲ್ಲಿ ಮುಂಬೈ ನಗರದೊಂದಿಗೆ ಸ್ಪರ್ಧಿಸುತ್ತಿರುವ ಬೆಂಗಳೂರಿನಲ್ಲಿ ಜನ ಹೆಚ್ಚಿದಷ್ಟು ಮನೆ ಹೆಚ್ಚಲಿಲ್ಲ.

ಬಾಡಿಗೆ ಇರುವವರ ಸಂಪಾದನೆ ಹೆಚ್ಚದಿದ್ದರೂ ಬಾಡಿಗೆ ಮಾತ್ರ ಹೆಚ್ಚುತ್ತಿರುವುದು. ಬೆಂಗಳೂರಿನ ಲಾಲಬಾಗನ್ನು ಉದ್ದಗಲದರಸ್ತೆಗಳನ್ನು ಬಣ್ಣಿಸಿ ಬಾಯಾ ನೀರು ಕುಡಿಯುವರನ್ನು ನಮ್ಮ ಮನೆಯ ಮಲಗುವ ಕೊಠಡಿಯೆಂದು ನಾಮಕರಣಮಾಡಿಕೊಂಡಿರುವ ಕೊಠಡಿಗೆ ಕರೆದುತಂದು ತೋರಿಸಬೇಕು. ಆಗವರಿಗೆ ಬೆಂಗಳೂರಿನ ಗರ್ಭಗುಡಿಗಳ ಬಂಡವಳ ಗೊತ್ತಾಗುವದು. ವಯುಸ್ಸಿನ ಅಂದಾಜದ ಮೇಲೆ ಉಡುಪುಗಳನ್ನು ಹೊಲೆದು ಸಿದ್ಧಪಡಿಸುವಂತೆ ಇಬ್ಬರ ಉದ್ದ-ಎತ್ತರದ ಸರಾಸರಿ ಪ್ರಮಾಣದ ಮೇಲೆ ಮಲಗುವ ಕೊಠಡಿಯನ್ನು ಕಟ್ಟಿಸುವಷ್ಟು ಮನೆಕಟ್ಟುವ ಮಾಲಕರು ಬುದ್ಧಿವಂತರಾಗಿರುವರು. ಧಾರಾಳವಾಗಿ ಉರಳಾಡುವ ಕೊಠಡಿಯನ್ನು ಪಡೆಯುವ ಭಾಗ್ಯ ಬೆಂಗಳೂರಿನ ಬಹು ದಂಪತಿಗಳಿಗಿಲ್ಲ. ಈ ಸಂದರ್ಭದಲ್ಲಿ ಮುಂಬೈಯ ಮಿತ್ರರೊಬ್ಬರು ನನ್ನೊಂದಿಗೆ ಮುಂಬೈಯಲ್ಲಿ ಅಂದ ಮಾತೊಂದು ನೆನಪಿಗೆ ಬರುವುದು. ಅವರು ಮುಂಬೈಯ ನಗರದ ವಿಸ್ತರಣವೊಂದರಲ್ಲಿ ವಾಸಿಸುತ್ತಿದ್ದರು. ಮುಂಬೈಗೆ ಹೋಗಿ ಸೇರಿದ ಐದಾರು ವರುಷಗಳಾಗಿದ್ದರೂ, ಅವರು ಮದುವೆಯಾಗಿ ಒಂದು ವರುಷವಾಯಿತಂತೆ. ನಾನು ಏಕೆ ಮದುವೆಗೆ ವಯುಸ್ಸು ಸಾಲದಿತ್ತೋ, ಅಥವಾ ಹೆಣ್ಣಿನ ಕ್ಷಾಮವಿದ್ದಿತೋ ಎಂದು ನಗೆಯಾಡಿದೆ. ಅಷ್ಟು ಹೊತ್ತಿಗೆ ನನ್ನ ಸ್ನೇಹಿತನ ಅರ್ಧಾಂಗಿಯೂ ಒಳಗಿನಿಂದ ಬಂದರು. ನನ್ನ ಪ್ರಶ್ನೆಗೆ ಉತ್ತರ ಕೊಡುವ ಮೊದಲು ನನ್ನ ಪ್ರಶ್ನೆಯನ್ನು ಆಕೆಗೆ ಈತ ಚೆನ್ನಾಗಿ ವಿವರಿಸಿದ್ದನು. ವಿದ್ಯಾವಂತ ತರುಣಿ, ಈ ಪ್ರಶ್ನೆಗೆ ಆಕೆಯೇ ಉತ್ತರವನ್ನು ಕೊಡವ ಉತ್ಸಾಹ ತೋರಿದಳು. ಆದರೆ ಗಂಡನೇ ಮುಂದಾದನು. ಮಿಸ್ಟರ ಇದು ಮುಂಬೈ. ಮನೆ ಸಿಕ್ಕಿದ ಮೇಲೆ ಮದುವೆ ಮಾಡಿಕೊಳ್ಳಬೇಕು. ನನಗೆ ಹೆಣ್ಣು ಸಿಕ್ಕಿ ಮೂರು ವರುಷವಾಯಿತು. ಮನೆ ಸಿಕ್ಕು ವರುಷ ಮಾತ್ರವಾಯಿತು. ಮೊದಲು ಮನೆಯೊಂದಿಗೆ ಮದುವೆ, ಆ ಮೇಲೆ ಮಡದಿಯೊಂದಿಗೆ. ಬಿಡದಿ ಸಿಕ್ಕಿದ ಮೇಲೆ ಮಡದಿ, ಎಂದೀತ ಪ್ರಾಸುಬದ್ಧವಾಗಿ ಹೇಳತೊಡಗಿದನು. ಮದುವೆಯಾದ ಹುಡುಗೆ ಮುಸಿ ಮುಸಿ ನಕ್ಕಳು. ನಾನೂ ಘಟ್ಟಿಯಾಗಿ ನಕ್ಕು ರಸಾಭಾಸಮಾಡಲಿಲ್ಲ. ಆದರೆ ೧೫ ವರುಷಗಳ ಹಿಂದೆ ನಾನು ನಿನ್ನನ್ನು ಮದುವೆ ಮಾಡಿಕೊಂಡಾಗ, ಬಾಡಿಗೆ ಮನೆಯ ಸಮಸ್ಯೆಗೆ ಇಷ್ಟೊಂದು ಮರ್ಯಾದೆ ಇರಲಿಲ್ಲ ಅಲ್ಲವೆ.

ನನಗೆ ಹೊತ್ತು ಹೋಗಲಿಲ್ಲ. ಎಲ್ಲೂ ಇಲ್ಲದ, ಎಂದೂ ಇರದ ಕೆಲಸ ನಿನಗೆ ಎಂದು, ಗೊಣಗುತ್ತ ಕಣ್ಣುಮುಚ್ಚಲು ಪ್ರಯತ್ನಿಸಿದೆನು. ಪೂರ್ಣೀ ಕಣ್ಣು ಮುಚ್ಚುವುದೇ ತಡ ಕಣ್ಣಿಗೆ ಕಂಡುದೇನು ಗೊತ್ತೆ; ಕಾವೇರಿಯ ಬಂಡೆಗಲ್ಲು ನೀರು ಜಾರುತ್ತಿರುವ ಕರಿಯ ಕಲ್ಲುಗಳು. ಶ್ರೀರಂಗಪಟ್ಟಣದ ರಂಗನಾಥ ಸ್ವಾಮಿಯಷ್ಟೇ ಕಪ್ಪು ಬಂಡೆ, ಕಣ್ಣಿಗೇಕೆ ಬಿದ್ದಿತೆಂದೂ ಆ ಕಲ್ಲಿನತ್ತ ಕಣ್ಣೋಡಿಸಿದಾಗ, ಅಲ್ಲಿ ಕಂಡೆ ನೀನು. ಕಾವೇರಿಯು ನೀನು ಹುಟ್ಟಿದ್ದ ಬಟ್ಟೆಯಲ್ಲಿ ಒದ್ದೆಯಾಗಿ, ನಿನ್ನ ಭಕ್ತಿಗೆ ಮೆಚ್ಚಿಯೇ ಏನೋ ನಿನ್ನ ಮೈಗೇ ಅಂಟಿಕೊಂಡಿದ್ದಳು. ಇದನ್ನು ನೋಡಿ ಕಣ್ಣು ಮುಚ್ಚಲಿಲ್ಲ. ಕಣ್ಣುಬಿಟ್ಟೆ ನೋಡಿದೆ. ನಿನ್ನ ಬಳೆಯ ಸದ್ದು ಇನ್ನೂ ಅಡಿಗೆಯ ಮನೆ ಯಲ್ಲೇ ಲಾಸ್ಯವಾಡುತ್ತಿದ್ದಿತು. ಆದರೆ ಶ್ರೀರಂಗಪಟ್ಟಣ ಕಾವೇರಿ, ಬಂಡೆ ಇವು ನನ್ನ ನೆನಹಿನ ತೆರೆಯನ್ನು ಓಸರಿಸಿಬಿಟ್ಟವು. ಪತ್ರ ಉದ್ದವಾಗಿ ಬಿಡು ವುದು, ಆದ್ದರಿಂದ ಮತ್ತೊಮ್ಮೆ ಅವೆಲ್ಲವನ್ನು ಹಿಡಿತದಲ್ಲಿಟ್ಟು ಬರೆಯುವೆನು.

ಇತಿ ನಿನ್ನವನೇ

x x x

## [೮]

ಓ ನನ್ನಾಕೆ,

ನಿನಗೆ ಮತ್ತೊಂದು ಪತ್ರ ಬರೆಯಬೇಕೆಂದು ನಾನು ದಿನದ ಕೆಲಸ ದಿಂದ ಬಿಡುವು ಮಾಡಿಕೊಂಡು ಕುಳಿತು ಕೊಳ್ಳಬೇಕೆಂದಿದ್ದೆ. ಅಂದು ಬೆಂಗ ಳೂರಿನಲ್ಲಿ ಸಾಲು ಸಾಲಾಗಿ ನೆತ್ತಿಗೇರಿದ್ದ ಚಿತ್ರಗಳನ್ನು ಅರ್ಧ ಚಿತ್ರಿಸಿ ಮುಗಿಸಿದ್ದ ಪತ್ರವನ್ನೇ ಇಂದು ಮುಂದುವರಿಸಲು ಸಿದ್ಧನಾಗಿದ್ದೆನು. ನನ್ನ ಸ್ಫೂರ್ತಿಗೆ ತೀರ್ಥವಾದ, ಗೋಪಾಲರಾಯರ ಫಿಲ್ಟರ ಕಾಫಿಯೂ ಕರುಳಿ ನಲ್ಲಿ ಹರಿಯುತ್ತಿತ್ತು. ಅಷ್ಟು ಹೊತ್ತಿಗೆ ನಿನ್ನ ಪತ್ರವೂ ಬಂದೇಬಿಟ್ಟಿತು. ಮಧ್ಯಾಹ್ನದ ಟಪಾಲಿನ ವೇಳೆಗೆ ಬರುವ ಪತ್ರ ಅಂದು ಮುಂಜಾನೆಯ

ಟಪಾಲಿಗೇಕೆ ಬಂದಿತೋ? ಈ ಪತ್ರ ಈಗಲೇ ಬರದಿದ್ದರೆ ಶ್ರೀರಂಗಪಟ್ಟಣ ದಲ್ಲಿನ ನಮ್ಮ ನಾಲ್ಕು ದಿನಗಳ ಸುಲ್ತಾನವರ್ಬಾರದ ಜೀವನವನ್ನೆಲ್ಲಾ ಚಿತ್ರಿಸಿಬಿಡುತ್ತಿದ್ದೆನು. ನಿನ್ನ ಪತ್ರದ ಆ ಹಿತೋಪದೇಶ ಅಲ್ಲಿನ ನಿನ್ನ ಜೀವ ನದ ಸಂಕಟದ ಸಂಭ್ರಮ ಇವೆಲ್ಲವನ್ನೂ ಓದುತ್ತಿರುವಾಗಲೇ ನನ್ನ ನೆನಪಿಗೆ ಕಾರ್ಗತ್ತಲು ಕವಿಯಿತು.

ರಂಗನಾಥನ ದೇವಾಲಯದ ಮುಂದೆ, ಪಾಳಾಗಿ, ಬಯಲಾಗಿ ಭಿನ್ನ ವಾಗಿ, ಅವಶೇಷವಾಗಿ ನಿಂತಿರುವ ಟೀಪುಸುಲ್ತಾನನ ಅರಮನೆಯಂತೆ ಶೂನ್ಯನಾಯಿತು ನನ್ನ ಮನಸ್ಸು. ಈ ಅರಮನೆಗಿರುವ ಇತಿಹಾಸವೆಷ್ಟೋ ಆದರವನ್ನು ಹೇಳದೆ, ಮೂಕಾಗಿ ಬಂದವರ ಹೋದವರ ಬಣ್ಣಿಸುವರ ಬೈಯುವರ ವಸ್ತುವಾಗಿ ಅದು ನಿಂತಿರುವಂತೆಯೇ ನೋಡುವವರ, ಕಾಡು ವವರ, ಅಣಕಿಸುವರ ದವಡೆಗೆ ಸಿಕ್ಕಿರುವ ನನ್ನ ಜೀವನದ ನಿಜ ಚಿತ್ರವನ್ನು ನಿನ್ನ ಶಬ್ದಗಳಲ್ಲಿ ಕಂಡುಕೊಂಡು ಕ್ಷಣಹೊತ್ತು ಕೈಕಟ್ಟಿ ಕುಳಿತುಕೊಂಡೆನು. ಈ ಕೈಸನ್ನೆಗೆ ಕಣ್ಣುಗಳು ಮುಚ್ಚಿಕೊಂಡವು. ಮುಖದ ಕಣ್ಣುಗಳು ಮುಚ್ಚಿದ ಕೂಡಲೇ ಹೃದಯದ ಕಣ್ಣುಗಳು ತೆರೆದವು. ಆದರೂ ಅಲ್ಲಿ ಕಂಡುದುದು ನೀನು; ನಿನ್ನ ಪತ್ರದಲ್ಲಿ ಗೆರೆಯೊಡೆದು ದಪ್ಪವಾಗಿ ಬರೆದಿರುವ ಆ ದೊಡ್ಡಕ್ಷರಗಳ ಒಂದೇ ಒಂದು ವಾಕ್ಯ.

**"ಲೋಕವನ್ನು ಮೀರಿ ಬದುಕುವ ಎದೆತನವು ನಿಮಗೆ ಬಂದಾ ಗಲೇ ನಮಗೆ ಸುಖ."** ಪೂರ್ಣೀ, ಇದೆಷ್ಟು ದೊಡ್ಡ ಮಾತು. ಯಾವ ದೃಷ್ಟಿಯಿಂದ ಯಾವ ಭಾವನೆಯಿಂದ, ಏತಕ್ಕಾಗಿ ನನಗೆ ಈ ವಿರೋಪದೇಶ ವನ್ನು ಮಾಡುತ್ತಿರುವಿ? ಇದನ್ನು ತಾತ್ವಿಕವಾಗಿ ತೆಗೆದುಕೊಳ್ಳಲೋ ಅಥವಾ ವ್ಯವಹಾರಿಕವಾಗಿ ತೆಗೆದುಕೊಳ್ಳಲೊ? ಅಥವಾ ಎರಡು ದೃಷ್ಟಿಯಲ್ಲೂ ತೆಗೆದುಕೊಳ್ಳಬೇಕೋ?

ಹತ್ತೇ ಹತ್ತು ಜನರು ಸಾಕು, ಲೋಕವನ್ನು ಮೀರಿ ಬದುಕಬಲ್ಲ ಸಾಹಸಿಗಳು? ಅವರಿಂದ ಲೋಕದ ಉದ್ಧಾರವಾಗುವುದು ಎಂದು ಮಹರ್ಷಿ ಅರವಿಂದರು ಹಿಂದೊಮ್ಮೆ ಅಂದ ಮಾತನ್ನು ನೀನೆಲ್ಲಿಯಾದರೂ ಓದಿದ್ದೆ

ಯೇನು? ಅದು ನೆನಪಿಗೆ ಬಂದಿತೆ? ಅಂತಹ ಸಾಹಸಿ ನಾನಾಗಬೇಕೆಂಬುದು ನಿನ್ನ ಬಯಕೆಯೇ? ನೀನು ಮನಸ್ಸು ಮಾಡಿದರೆ ನನ್ನನ್ನು ಅಂತಹ ಸಾಹಸಿಯಾಗಿಯೇ ಮಾಡಬಲ್ಲೆ.

"No man can live piously or die righteously without a wife" ಅಂದರೆ ಯಾವನಾಗಲಿ ಹೆಂಡತಿಯಿಲ್ಲದೆ, ಪವಿತ್ರವಾಗಿ ಬಾಳಲಾರ, ನ್ಯಾಯವಾಗಿ ಸಾಯಲಾರ ಎಂಬ ರಿಚರ್ಸ ಉಕ್ತಿಯನ್ನು ನಾನು ಒಪ್ಪಿಕೊಳ್ಳುವದರಲ್ಲಿ ಹಿಂದು ಮುಂದು ನೋಡದಿರುವಾಗ, ನಾನು ಲೋಕ ಮೀರಿ ಬದುಕುವಂತಹ ಎದೆತನ ಪಡೆಯಲು ನಿನ್ನ ಎದೆಯ ಧೈರ್ಯವನ್ನು, ಭುಜದ ಬಲವನ್ನೂ ಕೊಡು ಎಂದು ಕೇಳಿಕೊಳ್ಳುವುದಕ್ಕೆ ನಾಚಿಕೆ ಪಡುವುದಿಲ್ಲ.

ನಮ್ಮ ಮನೆಗೆ ನನ್ನ ಮಡದಿಯಾಗಿ ಬಂದಾಗ ತಲೆ ಎತ್ತಿ ನೋಡಲು ಸಹ ನಿನಗೆ ನಾಚಿಕೆ. ಆದರೆ ಮನೆಯು ಹಳೆಯದಾದಂತೆ, ಮನವು ಕುದ್ರಿದಂತೆ ನೀನು ಕುದುರಿಕೊಂಡೇ ಬಿಟ್ಟೆ. ಕೊನೆಗೊಂದು ದಿನ ನಿಮ್ಮ ಪ್ರೇಮದ ಸಾಲವನ್ನು ತೀರಿಸಿರುವೆನು ಇದೋ ನೋಡಿ ಎಂದು ಲೀಲಾ ಶಂಕರರನ್ನು ಎಳೆದು ತಂದು ನಿಲ್ಲಿಸಿದೆ. ಸಾಲ ಕೊಟ್ಟವರಿಗೆ, ಅಸಲು ಬಡ್ಡಿ ಒಪ್ಪಿಸಿ ನಿಂತ ಸಾಲಗಾರನ ಸಮಾಧಾನದ ಮುಖದಂತೆ ಮುಖ ಮಾಡಿ ನಿಂತುಕೊಳ್ಳಲಾರಂಭಿಸಿದ ಮುಖದ ಮಟ್ಟಕ್ಕೆ ನಿನ್ನ ಮುಖವಾಯಿತು. ರಾಘವನು ಹುಟ್ಟಿದ ಮೇಲಂತೂ ಸಾಲದ ಜೊತೆಗೆ ಚಕ್ರಬಡ್ಡಿಯನ್ನು ತೆತ್ತುವರಂತೆ, ನಿಮ್ಮ ಹಂಗೇನು ಎನ್ನುವಷ್ಟು ಜಂಭ ಬಂದಿತು ನಿನಗೆ. ನಾನು ಎಲ್ಲವನ್ನು ಸಹಿಸಿಕೊಂಡೆ, ನೀನು ನನ್ನ ಸೋದರ ಮಾವನ ಮಗಳೆಂದು. ಈಗ ನನಗೆ ಎದೆತನದ ಪಾಠವನ್ನು ಹೇಳಿಕೊಟ್ಟೆ. ಇನ್ನುಳಿದಿರುವುದೇನು? ಪೂರ್ಣೀ, ನೀನು ನನ್ನ ಕಿವಿ ಹಿಂಡಿ ಇನ್ನು ಮುಂದೆ ನೀವು ವಿರಹ, ಅಗಲಿಕೆ, ಬೇನೆ, ಬೇಸರ ಎಂದು ಪತ್ರ ಬರೆಯಬೇಡಿರಿ. ನಾನು ಇನ್ನು ನಿಮಗೆ ಪ್ರೇಮದೇವತೆ ಮಾತ್ರವಲ್ಲ. ನಿಮ್ಮ ಎದೆಗೆ ಶಕ್ತಿ ತುಂಬುವ ಕಾಳಿದೇವತೆ ಎಂದೆಲ್ಲಿ ಗರ್ಜಿಸಿಬಿಡುವೆಯೋ....ಸದ್ಯ, ದಮ್ಮಯ್ಯ, ಅಂತಾಗು. ನೀನು ನನ್ನ ಪಾಲಿನ ಕಾಳಿಯಾದರೆ, ಎಷ್ಟರ ಕೆಲಸ ನನಗೆ ಈ ಲೋಕ

ವನ್ನು ಮೀರಿ ನಿಲ್ಲುವುದು. ಆದರೆ ಈ ಲೋಕದ ಕಾಳಿಯಾಗಬೇಡ ಆ ಲೋಕದ ಕಾಳಿಯಾಗು ಅಷ್ಟೇ. ಆಗ ನನ್ನ ಭುಜದ ಮೇಲೆ ಆದಿಶಕ್ತಿ ಬಂದಾಂತಾಗುವುದು.

ನಾನು ಈ ಲೋಕವನ್ನು ಕಂಡರೆ ಹೆದರುವುದು ಕೆಲವೇ ಕೆಲವು ವಸ್ತುಗಳಿಗೆ. ನಿನ್ನ ಕಣ್ಣೀರು, ಮಕ್ಕಳ ಬರಿಹೊಟ್ಟೆ, ಸತ್ಯವಂತರ ಶಾಪ ಈ ಮೂರರ ಹೊರತು ನಾನು ಯಮನ ಸಾವಿನ ಹಗ್ಗವನ್ನು ಕಂಡರೂ ಮುಕ್ಕಣ್ಣನ ಫಾಲ ನೇತ್ರವನ್ನು ಕಂಡರೂ ಹೆದರುವುದಿಲ್ಲ. ಹಾಗೆ ಹೆದರು ವುದಾಗಿದ್ದರೆ, ಬೆಂಗಳೂರು ಇಷ್ಟು ಹೊತ್ತಿಗಾಗಲೇ ನನ್ನನ್ನು ನುಂಗಿ ನೀರು ಕುಡಿದು ಬಿಡುತ್ತಿತ್ತು. ಯಾರ ಕ್ರಿಯಾಶಕ್ತಿ ಬಲವಾಗಿರುವುದೋ ಅವರು ತಮ್ಮ ಭವಿಷ್ಯವನ್ನಷ್ಟೇ ಅಲ್ಲ, ಇತರರ ಭವಿಷ್ಯವನ್ನು ರೂಪಿಸಿಕೊಡಬಲ್ಲರು. ಎಂಬ ನಂಬಿಕೆಗೆ ನೀನು ಅನುದಿನವೂ ನೆರವಾಗುತ್ತಲೇ ಬಂದೆ. ಒಂದೇ ರಾಗೀ ರೊಟ್ಟಿಯನ್ನು ನಾಲ್ಕು ಭಾಗ ಮಾಡಿ ಎರಡು ದಿನ ತಿನ್ನಬೇಕಾದ ಬಡತನದ ದಿವಸಗಳಲ್ಲೂ ನೀನು ಅಳಲಿಲ್ಲ. ಅಂದು ನಿನ್ನ ಕಣ್ಣಲ್ಲಿ ಒಂದು ಹನಿಯನ್ನು ನಾನು ಕಂಡಿದ್ದರೆ ನಾನು ನೀರಿನಲ್ಲಿ ಬಿದ್ದ ಸುಣ್ಣದ ಹರಳಂ ತಾಗಿ ಬಿಡುತ್ತಿದ್ದೆ. ಅದೆಲ್ಲವನ್ನು ನೀನು ಅರ್ಥ ಮಾಡಿಕೊಂಡು ಆ ಹಸಿ ವನ್ನು ಅಡಗಿಸಿಕೊಂಡು ಹುಸಿನಗುವನ್ನು ನಕ್ಕು ನನ್ನನ್ನು ನಗಿಸುತ್ತಿದ್ದೆ. ಆದರೆ ಪ್ರೇಮಕ್ಕೆ ವಯಸ್ಸಾದಂತೆಲ್ಲಾ ನೀನು ನಿನ್ನ ವಯಸ್ಸನ್ನು ಅದ ರೊಂದಿಗೆ ಮೇಳವಿಸಿಕೊಂಡು ಹಣ್ಣಾಗುತ್ತಿರುವಿ. ಹೆಣ್ಣು ಮೊದಲೇ ಸಿಹಿ. ಅದು ಹಣ್ಣಾದ ಮೇಲೆ ಅದರ ಸವಿಯನ್ನು ಕೇಳಬೇಕೆ? ಪ್ರಾಯದಲ್ಲಿ ಪ್ರೇಮವಾವುದೋ, ಕಾಮುವಾವುದೋ ಎಂಬುದನ್ನು ಬೇರ್ಪಡಿಸಿ ನೋಡು ವುದಕ್ಕೇ ವೇಳೆ ಇರುವುದಿಲ್ಲ. ಒಂದೊಂದು ಸಾರಿ ಅತಿ ಕಾಮಿಗೂ ಬಹು ಪ್ರೇಮಿಗೂ ಇರುವ ಅಂತರವೇ ಆಗ ಕಾಣುವದಿಲ್ಲ. ಆ ಆವೇಶವಿಳಿ ದಾಗ, ಕಾಮುದ ಪ್ರಾಯವು ಕಡಿಮೆಯಾದಾಗ, ಹೆಣ್ಣು-ಗಂಡುಗಳ ಪ್ರೇಮದ ನಿಲುವು ನಿಚ್ಚಳವಾಗಿ ಕಾಣಿಸುವುದು. ಈಗಲೇ ನನ್ನ ನಲವತ್ತು ವರುಷ ವಯಸ್ಸಿನ ನನ್ನ ನಿನ್ನ ಅನುರಾಗದಲ್ಲಿ ನೀನು ಕುರುಡಿಯಾಗಿರುವಿ. ನಾನು ಊರಿಗೆ ಬಂದಾಗಲೆಲ್ಲಾ, ನೀನು ಏಕಾಕಿಯಾಗಿರಲಾರನೆಂಬುದನ್ನು

ಹೇಗೋ ನನಗೆ ಸಂಕಟದ ಸ್ವರದಲ್ಲಿ ಮುಟ್ಟಿಸುವೆ. ಈ ಸಂಕಟ ಮುಟ್ಟಿದಾಗಲೇ ಮೊದಲೇ ತಡೆಯಲಾರದ ಹೃದಯವು ಮತ್ತಷ್ಟು ಮುದುಡಿ ಹೋಗುತ್ತಿದ್ದಿತು. ಇದರ ಜೊತೆಗೆ ಅನ್ನ ಅರಿವೆಗೂ ನನ್ನ ನಿನ್ನ ಔದಾರ್ಯಕ್ಕೂ, ಬಂಧು ಮಮತೆ, ಸಹೋದರ ಸಹಾನುಭೂತಿ, ಆದರ, ಆತಿಥ್ಯಗಳಿಗಾಗಿ ಸಾಲದ ನನ್ನ ಸಂಪಾದನೆ, ಇವು ಸೇರಿಕೊಂಡು ನನ್ನನ್ನು ಬತ್ತಿಸಿ ಬಿಟ್ಟಿದ್ದವು. ನೀನು ಈ ಸಾರಿಯ ಪತ್ರದಲ್ಲಿ ನನ್ನ ನಿಜರೂಪವನ್ನೇ ನಿಜವಾಗಿ ಚಿತ್ರಿಸಿರುವೆ. ಆ ಮಾತುಗಳನ್ನೇ ಇಲ್ಲಿ ಪುನರುಚ್ಚರಿಸಿರುವೆನು.

"ಉರುಬಿದರೆ ರಕ್ತ ಬರುವಂತೆ ಇದ್ದ ನಿಮ್ಮ ದೇಹ ಬತ್ತಿಹೋಗಿ ಸೊರಗಿ ಸೊಪ್ಪಾಗಿರುವುದನ್ನು ನೋಡಿ, ನಾನು ಕ್ಷಣ ಕ್ಷಣಕ್ಕೂ ಕ್ಷಯಿಸುತ್ತಿರುವೆನು. ವೈದ್ಯರು ವಾಸಿಮಾಡದಂತಹ ಕ್ಷಯರೋಗವು ನನಗೆ ಬರತೊಡಗಿದೆ. ಚಿಂತೆ, ಚಿತಾಗ್ನಿಗಿಂತ ಕ್ರೂರಾಗ್ನಿ ಎಂಬುದನ್ನು ನಿಮಗೆ ಹೇಳಬೇಕೆ? ನಿಮ್ಮ ಚಿಂತೆಯ ಕಾರಣವನ್ನು ಬಿಟ್ಟು ಲೋಕಮಿೀರಿ ನಿಲ್ಲುವ ಎದೆತನದಿಂದ ಎದ್ದು ನಿಲ್ಲಿರಿ; ಆಗ ನನ್ನ ಕ್ಷಯರೋಗವು ವಾಸಿಯಾಗುವುದು."

ಪೂರ್ಣೀ, ಪೂರ್ಣೀ ಬರೆಯಲಾರೆ. ನಿನ್ನ ಶಬ್ದಗಳಲ್ಲಿ ಉದಿಸಿರುವ ನೋವಿನ ಕಾವನ್ನು ತಡೆಯಲಾರೆ. ಎದೆ ತುಂಬ ನಾನು ತಡೆಯಲಾಗದ ಭಾವಾವೇಶವು ಬಂದು ತುಂಬಿಕೊಂಡಿದೆ. ಇದೇನು ಶಕ್ತಿದಾನದ ಹಿನ್ನೆಲೆಯೋ, ಅಥವಾ ಮತ್ತೇನೊ? ಮತ್ತೊಮ್ಮೆ ಸುಧಾರಿಸಿಕೊಂಡು ಬರೆಯುವೆನು.

ಇತಿ ನಿನ್ನಾತ.

x x x

[೯]

ಜೀವ ಸ್ನೇಹಿತೆ,

ಇಂದೇನು ಬರೆಯಬೇಕೆಂದು ತಲೆಕೆರೆದುಕೊಂಡಾಗ, ನೀನು ಒಂದೆರಡು ವರುಷಗಳ ಹಿಂದೆ, ಕಾಲೇಜಿನ ವಿದ್ಯಾರ್ಥಿನಿಯಾಗಿ ಜೊತೆಗೆ ಮಕ್ಕಳ

ತಾಯಿಯಾಗಿ ಓದುತ್ತಿದ್ದಾಗ ಮೈಸೂರಿನಿಂದ ಬರೆಯುತ್ತಿದ್ದ ಪತ್ರದ ರಾಶಿಯನ್ನು ಹರವಿಕೊಂಡೆನು. ಕೈಗೆ ಸಿಕ್ಕಿದ ಪತ್ರವೊಂದರಲ್ಲಿ ನಿನ್ನ ಬಿಸಿಯುಸಿರಿನ ಬಿಸಿಯು ನನಗೆ ತಟ್ಟಿತು.

''ಹೂವು ಬಾಡದ ಮುನ್ನ ಬಿಸಿಲಿಗೆ ಅದು ಕುಗ್ಗಿಹೋಗುವ ಮೊದಲು ಗಾಳಿಗೆ ಆದರ ಪಟಲಗಳು ಮುದರಿಕೊಳ್ಳುವ ಮುಂಚೆ, ಅವರಿವರ ಕಣ್ಣಿನ ಕಿಚ್ಚು ಅದಕ್ಕೆ ಬೀಳುವ ಮುನ್ನವೇ ಪುಷ್ಪವನ್ನು ಎದೆಗೊತ್ತಿ ಎದೆಯಲ್ಲಿ ಮುಚ್ಚಿಟ್ಟುಕೊಳ್ಳಬೇಕು.''

ಮೇಲಿನ ಈ ಒಂದು ದೊಡ್ಡ ವಾಕ್ಯದಲ್ಲಿ ನಿನ್ನಲ್ಲಿನ ಭಾವನೆಯ ಐಸಿರಿಯನ್ನೂ ಅದನ್ನು ಹೊಂದಲಾಗದಿದ್ದುದಕಾಗಿ ಬಂದ ನೋವಿನ ಉರಿಯನ್ನೂ ತುಂಬಿರುವಿ. ಪತ್ರ ಹಳೆಯದಾದರೂ ಶಬ್ದಗಳು ಓದಿದಷ್ಟು ಹೊಸದಾಗುತ್ತಿವೆ; ಹರಿತವಾಗುತ್ತಿವೆ. ನಾನಂದು ಈ ಪತ್ರಕ್ಕೆ "ಬೇಡವೆಂದವರಾರು? ಪುಷ್ಪದ ಪ್ರತಿಯೊಂದು ಎಸಳೂ ಆದರ ಕಮ್ಮನೆಯ ಪರಿಮಳದ ಅಣುವೊಂದೊಂದೂ ನಿನಗಾಗಿಯೇ ಮೀಸಲು" ಎಂದು ನಿನಗೆ ಸಮಾಧಾನದ ಪತ್ರವನ್ನು ಬರೆದ ನೆನಪು. ಆದರೆ ಆ ಪತ್ರ ಈಗ ಹೊಸದಾಗಿ ಬಂದಿತೇನೋ? ಈಗೇನು ಉತ್ತರ ಕೊಡಲಿ? ಹಳೆಯ ಉತ್ತರದಲ್ಲೇ ಔಚಿತ್ಯವಿದ್ದರೂ, ಅದನ್ನು ಕೊಟ್ಟ ಮೂರು ವರುಷಗಳ ನಂತರ ಕೊಡಬಹುದಾದ ಉತ್ತರವೆಂತೆಂಬುದನ್ನು ನಾನು ಇತ್ತೀಚಿಗೆ ಬರೆಯುತ್ತಿರುವ ಪತ್ರಗಳಿಂದ ನೀನು ಊಹಿಸಿಕೊಂಡಿರುವೆ. ಪ್ರೇಮವಾರಿಲ್ಲ, ಬಯಕೆ ಮುಗಿದಿಲ್ಲ. ಆದರೆ ಜೀವನದ ನಲುಗಾಟ, ಕೊರಗಾಟ, ಜಂಜಾಟ ಇವು ಸ್ವರದ ಇಂಪನ್ನು ಕೆಡಿಸಿವೆ; ಭಾವನೆಯ ಪಂಪನ್ನು ಸೊರಗಿಸಿವೆ. ಆದರೂ ಆಗಾಗ, ನೀನು ಮೊನ್ನೆ ಮೊನ್ನೆ ಉಪದೇಶಿಸಿದಂತೆ ಲೋಕವಮೀರುವ ಎದೆತನವು ಬರುವುದು. ಆಗ ಉಮರಖಯಾಮನ ಧೈರ್ಯ, ಆವೇಶ ಬಂದು " ಬಾ ತುಂಬು ಬಟ್ಟಲಲಿ ಮಧುವನು; ನಾಳೆ ಎಂಬೆಯೋ? ನಾಳೆ ಸೇರುವುದು ನೂರ್ಕೋಟಿ ನಿನ್ನೆಗಳ ಜೊತೆಗೆ " ಎಂಬ ಅವನ ಹಾಡು ನನ್ನ ಕಂಠಕ್ಕೆ ಬಂದಾಗ, ಮಧುರ ಬೀರುವ ಹೊನ್ನ ಹೂವು ನೀವೆಂದು ನೀನು ನನ್ನನ್ನು ಸಂಬೋಧಿಸಿ ಬರೆಯುತ್ತಿದ್ದ ಹೆಸರು ಚೆನ್ನೆನಿಸಿ ಹೃದಯವು ಅಆ

ಳುವುದು. ಆದರೆ, ನಿನ್ನ ಇಂದಿನ ನಿಸ್ಸಹಾಯಕ ಜೀವನವನ್ನು ನೆನಿಸಿ ಕೊಂಡಾಗ ಈ ಮಾತಿನಲ್ಲಿ ನನ್ನನ್ನು ಅಣಕಿಸುವ ಅಣಕ ಕಾಣುವುದು.

ತಾಳು, ಇನ್ನೊಂದು ಪತ್ರವನ್ನು ಹುಡುಕಿ ನೋಡುವೆನು. ಅದರ ಲ್ಲೀನಾದರೂ ಸಮಾಧಾನ ಸಿಕ್ಕುವುದೇ ಎಂದು. ಈಗ ಕೈಗೆ ಸಿಕ್ಕಿದುದು ನಾನು ನಿನಗೆ ಬರೆದ ಕಾಮನ ಹುಣ್ಣಿಮೆಯ ಬಣ್ಣನೆಯ ಪತ್ರ. ಇದ ನ್ನೋದಿ ನೀನು ಮರೆತಿರಬಹುದು. ಆದ್ದರಿಂದ ಆ ಪತ್ರವನ್ನು ಯಥಾವ ತ್ತಾಗಿ ಮತ್ತೆ ಇಲ್ಲಿ ಎತ್ತಿ ಬರೆಯುವೆನು. ಈಗ ಓದಿ ನೋಡು. ಇದರ ಪರಿಣಾಮವು ನಿನ್ನ ಪತ್ರವನ್ನೋದಿದಾಗ ಈಗ ನನಗಾದಂತೆಯೇ ನಿನಗೂ ಆಗುವುದಾದರೆ, ನಾವಿಬ್ಬರೂ ಇರುವ ಅಧ್ಯಾಯ ಎಷ್ಟನೆಯದು ಎಂಬು ದನ್ನು ನಿರ್ಧರಿಸಿಕೊಳ್ಳಬಹುದು. ಆ ಪತ್ರ ಇಂತಿದೆ :—

"ಕಾಮನ ಹುಣ್ಣಿಮೆಯ ನೆನಪಿಗಾಗಿ ಬರೆಯುತ್ತಿರುವ ಪತ್ರವಿದು. ನಿನ್ನನ್ನು ಅಳಿಸುವುದಕ್ಕಲ್ಲ, ನಗಿಸುವುದಕ್ಕೆ. ನಿನ್ನೆ ರಾತ್ರಿ ಹುಣ್ಣಿಮೆ ತಾನೆ? ಚಂದ್ರ ರೋಹಿಣಿಗೆ ರತಿಯ ವೇಷವನ್ನು ಹಾಕಿಕೊಂಡು ಅನಂಗನಾದ ಮನ್ಮಥನ ದೇಹದಲ್ಲಿ ಹೊಕ್ಕು, ಅವನ ವಿಹಾರಕ್ಕೆಲ್ಲೂ ಎಡೆಸಿಗದೆ ನನ್ನ ಶಯ್ಯಾಗಾರದ ಅಥವಾ ವಿರಹದ ಗುಹೆಯ ಪಕ್ಕದಲ್ಲಿರುವ ಮೈದಾನಕ್ಕೆ ಬಂದನು. ಸರಿರಾತ್ರಿ. ನಿಶ್ಶಬ್ದವೆಂದು ಆತಬಂದನು. ನನ್ನ ಕಿಟಕಿ ತೆರೆದಿದ್ದಿತು. ನಾನು ಕಣ್ಣು ಮುಚ್ಚಿರಲಿಲ್ಲ. ಆದರೂ ಮತಿಗೆಟ್ಟ ಚಂದ್ರನಿಗೆ ನಾಚಿಗೆ ಇನಿ ತಿರಲಿಲ್ಲ. ರೋಹಿಣಿಯ ಸೊಂಟಕ್ಕೆ ಕೈ ಹಾಕಿದನು. ಹರಿಣಿಯನ್ನೂ ಜೊತೆಯಲ್ಲೇ ಕರೆದು ತಂದಿದ್ದನು. ಇವನ ಹೆಜ್ಜೆಯ ತಾಳಲಯಕ್ಕೆ ಸರಿ ಯಾಗಿ ಹೆಜ್ಜೆಯ ಇಂಚರಕ್ಕೆ ಹೊಂದಿಕೊಳ್ಳುವಂತೆ ರೋಹಿಣಿಯ ಹೊಂದೊ ಡುವುಗಳ ಶಬ್ದಕ್ಕೆ ಸರಿಯಾಗಿ ಈ ಹರಿಣಿ ಕುಣಿದು, ನಲಿವುದನ್ನು ಕಲಿತಿದ್ದಿತು. ನಾನು ಒಂದೆರಡು ನಿಮಿಷ, ಬಿಟ್ಟ ಕಣ್ಣುಗಳಿಂದಲೇ ನೋಡಿದೆ. ದಿಟ್ಟತನ ಹೆಚ್ಚು ಬಂದಿತು. ತಾಳು, ಮತ್ತೊಂದು ಹುಣ್ಣಿ ಮೆಗೆ ಇಲ್ಲಿಗೆ ಬಂದಿಯೋ ಜೋಕೆ. ನನ್ನ ವಿರಹವಡಗಿ ವಿಹರಿಸುವ ಉದ್ಯಾ ನವಿದಾಗುವುದು. ನೀನು ಬಂದರೆ ಚಂದ್ರ, ನಿನಗೆ ಅರ್ಧಚಂದ್ರಪ್ರಯೋಗ ವಾದೀತೆಂದು ತಿಳಿಸಿದೆನು. ಆಗ ಚಂದ್ರ ನನಗೆ ಹೀಗೆಂದು ಉತ್ತರ

ಕೊಟ್ಟನಲ್ಲಾ "ನಾಳೆ ನಾಳೆ ನನ್ನ ಸುಖ ಎಂದೆಂದುಕೊಂಡೆ. ನಿನ್ನ ಯೌವನವೆಲ್ಲಾ ಅಡಗಿತು. ನನ್ನ ಹಾಗೆ ನಿನಗೆ ಚಿರ ಯೌವನ ವಿದೆಯೇ? ನಾವು ಅಮರರು, ನೀನು? ನಾಳೆ ನಿನ್ನದೆಂದು ಹೇಗೆ ಗೊತ್ತು?" ಎಂದೆಂದನು. ಅದಕ್ಕೆ ನಾನುತ್ತರವಾಗಿ "ಯಮನನ್ನು ಗೆದ್ದ ಸಾವಿತ್ರಿ ಯಂತಹ ಸುದತಿ ನನಗಿರುವಾಗ ನಾಳೆ ಏಕೆ ಕಾಲವೆಲ್ಲವೂ ನನ್ನದೇ" ಎಂದು ಜಂಭ ಕೊಚ್ಚಿದೆ. ಅದಕ್ಕೆ ರೋಹಿಣಿ ತನ್ನ ಮೋರೆದಿರುವಿದಳು. ಬಾನಲ್ಲ ಇವನೇನು ಬಲ್ಲ ಸೊಗದಾನಂದವನ್ನು. ಹೊತ್ತೇಕೆ ಕಳುಹುವುದು. ಬೆಳಗಿನ ಜಾವವಾದರೆ ದೇವತೆಗಳು ಸ್ನಾನಕ್ಕೆ ಹೊರಡುವರು. ಅವರು ಬರುವ ಮುನ್ನವೇ ಕಾಮನ ಹುಣ್ಣಿಮೆಯನ್ನಾಚರಿಸೋಣ" ಎಂದು ಚಂದ್ರ ನನ್ನು ದರದರನೆ ಎಳೆದುಕೊಂಡು, ರೆಕ್ಕೆಯಿಲ್ಲದೆಯೇ ಹಾರಿಬಿಟ್ಟರು. ರೆಕ್ಕೆ ಯಲ್ಲಿ ಅಡಗಿಸಿಕೊಂಡುಗಗನವನ್ನು ಚುಂಬಿಸಲು ರೋಹಿಣಿ ನೆಗೆದುಬಿಟ್ಟಳು. ಸ್ತ್ರೀಯರು ಮೃದು ಹೃದಯಿಗಳೇ, ನೀನೇ ಹೇಳು. ನನ್ನ ಸ್ಥಿತಿ ನೋಡಿ, "ಅಯ್ಯೋ ಪಾಪ" ಎಂದು ಮರುಗಿದ್ದರೆ ಅವಳಿಗೇನು ಭಾರವಾಗುತ್ತಿತ್ತು? ಸ್ತ್ರೀಯರು ಕುಸುಮ ಕೋಮಲೆಯರಾದರೂ ಸ್ವಾರ್ಥಕ್ಕೆ ನಿಂತಾಗ ವಜ್ರ ದಷ್ಟು ಕಠಿಣರೂ ಹೌದು.

ಚಂದ್ರನು ನಡು ಆಗಸದಲ್ಲಿ ಯಾರಿಗೂ ಹೆದರದೆ, ಲಜ್ಜೆ ಬಿಟ್ಟು ಗೆಜ್ಜೆ ಕಟ್ಟಿದ ರೋಹಿಣಿಯೊಂದಿಗೆ ನರ್ತಿಸುತ್ತಿದ್ದನು. ಅಷ್ಟು ದೂರದಲ್ಲಿ ಅಷ್ಟು ಎತ್ತರದಲ್ಲಿದ್ದ ಚಂದ್ರಮನ ಕಣ್ಣು ನನ್ನ ಕೊಠಡಿಯ ಕಿಟಕಿಯ ಮೇಲೆ ಪುನಃ ಬಿದ್ದಿತು. ರೋಹಿಣಿಯ ದೃಷ್ಟಿಯೂ ಚಂದ್ರಮನ ದೃಷ್ಟಿ ಯನ್ನೇ ಹಿಂಬಾಲಿಸಿತು. ಇಬ್ಬರೂ ನೋಡುವರು; ಅಟ್ಟಹಾಸದಿಂದ, ದಿಟ್ಟವಾಗಿ ಗಟ್ಟಿಯಾಗಿ ನಕ್ಕು ನಲಿವರು, ನನ್ನ ಮುಖವನ್ನು ನೋಡಿ. ರೋಹಿಣಿ ತನ್ನ ಕಣ್ಣನ್ನು ಮುಂಚಾಚಿ ಕೊಠಡಿಯನ್ನೆಲ್ಲಾ ಹುಡುಕಿದಳು ನನ್ನ ರೋಹಿಣಿ ಎಲ್ಲಿರುವಳೆಂದು ? ನೋಡಿ, ಹುಡುಕಾಡಿದ ಮೇಲೆ, ನನ್ನ ಕಡೆಗೆ ಕೇಕೆ ಹಾಕಿದಳು. ಚಂದ್ರನು ಈ ಕೇಕೆಯೊಂದಿಗೆ ಕಿರುನಗೆಗೂಡಿ ಸಿದನು. ನನಗೆ ಕೋಪ ಬಹು ಬಂದಿತು. ಚಂದ್ರ ರೋಹಿಣಿಯರ ಕಡೆಗೆ ತಲೆ ಎತ್ತಿ, ತಾಳು ಚಂದ್ರ ನಗಬೇಡ, ನಾಳೆ ಹುಣ್ಣಿಮೆ, ಒಂದು ದಿನ

ವುಳಿದಿದೆ; ನಿನ್ನ ಬಾಳಿನ ಸುಗ್ಗಿ. ಆ ಮೇಲೆ ಅದು ಕುಗ್ಗಿ ಕುಗ್ಗಿ ರೋಹಿ ಣಿಯ ಹಿಗ್ಗೆಲ್ಲ ಮುದುರುವುದೆಂದು ಕೂಗಿಕೊಂಡೆನು. ಅದಕ್ಕೆ ಆತನೆಂದ ಓ ವಿರಹಿ ಇಂದು ನಮ್ಮದು. ಈಗ ಪಡೆದ ಸುಖ ನಮ್ಮದು. ನಾಳೆ ಹುಣ್ಣಿಮೆ. ಇನ್ನೊಂದು ಪಕ್ಷವು ನಮ್ಮ ಬಾಳಿನ ಕತ್ತಲು, ಆದರಿಂದ ಇಂದು ನಮಗೆ 'ಕಾಮನ ಹುಣ್ಣಿಮೆ.' ನಿನ್ನ ವೈರಾಗ್ಯ ಸಾಕು; ನಾಳೆ ನನ್ನದು; ನಾಳಿನ ಸುಖಕ್ಕಾಗಿ ಇಂದಿನ ತ್ಯಾಗ, ಎಂದು ದಿನಗಳನ್ನು ಎಣಿಸಿ ಕುಳಿತಿ ರುವ ನೀನು ಬಹು ಬುದ್ಧಿವಂತ ಎಂದು ಬುದ್ಧಿ ಹೇಳಿ ರೋಹಿಣಿಯ ಬಗಲಿಗೆ ಕೈಸೇರಿಸಿ ಮತ್ತಷ್ಟು ಹುರುಪಿನಿಂದ ಕಾಮ ರತಿಯರಂತೆ ಕುಣಿಯ ಹತ್ತಿದನು. ಘಂಟೆ ಗಟ್ಟಲೆ ಕುಣಿದನು. ನನಗೆ ನಟ್ಟ ಕಣ್ಣಾಗಳಾಗು ವರೆಗೂ ಕುಣಿದನು. ನನ್ನೆದೆ, ವಿರಹದಿಂದ ಬೆಂದಷ್ಟೂ ಅವನ ಕುಣಿತ ಕೇಕೆ, ಹಾಡು, ಇವು ಕಳೆಗೊಂಡವು. ಕೊನೆಗೆ ಮದವೇರಿದ ಚಂದ್ರಮನ ಕಣ್ಣಿಗೆ ಬಟ್ಟೆ ಕಟ್ಟುವಂತೆ ನನ್ನ ಕಿಟಕಿಯ ಕದವನ್ನು ಮುಚ್ಚಿಬಿಟ್ಟೆನು. ಆಗ ರೋಹಿಣಿಗೆ ಬಲು ಆನಂದವಾಯಿತು, ಬತ್ತಲೆಯಾಗಿ ಕುಣಿಯಲು. ನನ್ನ ಹೊರತು ಉಳಿದ ಜಗತ್ತು ಆನಂದದಿಂದ ನಿದ್ರಿಸುತ್ತಿತ್ತು. ಚಂದ್ರ ರೋಹಿಣಿಯರ ಮಧು ಚಂದ್ರನನ್ನು ನಾನೊಬ್ಬ ಈಪ್ಸಿತ ನಯನದಿಂದ ನೋಡುತ್ತಿದ್ದೆನು. ನಾನು ಕದ ಮುಚ್ಚಿದ ಮೇಲೆ ರೋಹಿಣಿ ಚಂದ್ರ ಇಬ್ಬರೇ ಉಳಿದರು. ಸ್ವಚ್ಛಂದ ಕ್ರೀಡೆಗೆ ಇದನ್ನೆಲ್ಲ ಇಷ್ಟು ಹೊತ್ತಿನ ವರೆಗೆ ಚಿತ್ರಗತವಾಗಿ ನೋಡುತ್ತಿದ್ದ ನನ್ನ ರೋಹಿಣಿಗೆ ಉಸಿರು ಬಂದಿತು. ಮೆಲ್ಲ ಮೆಲ್ಲನೆ ಮೆಲುನಗೆಯಾಡಲಾರಂಭಿಸಿದಳು. ಕೈಯ ಬಳೆಗಳನ್ನು ಮುಂದಳ್ಳಿ ತುಸು ಸದ್ದುಮಾಡಿದಳು. ಈ ಸದ್ದು ನನ್ನ ಎದೆಯುರಿಗೆ ಮತ್ತಷ್ಟು ತುಪ್ಪವನ್ನು ಸುರಿಸಿತು. ಚಂದ್ರನೂ ರೋಹಿಣಿಯೂ ಅದೃಶ್ಯರಾಗಿ ಬಂದಿ ರುವರೆ ಎಂದು ದೀಪ ಹಿಡಿದು ಕೊಠಡಿಯ ಸುತ್ತೆಲ್ಲ ನೋಡಿದೆನು. ಇಲ್ಲ ಯಾರೂ ಇಲ್ಲ. ಹಾಗೆಯೇ ದೀಪವನ್ನು ಸ್ವಲ್ಪ ಮೇಲೆತ್ತಿ ನೋಡಿದೆನು, ನಗುತಿಹಳು ನನ್ನಾಕೆ. "ಇದೋ ಬನ್ನಿ ಬನ್ನಿ, ಚಂದ್ರಮನ ಮೇಲೇಕೆ ಸಿಟ್ಟು ರೋಹಿಣಿಯ ಕಂಡೇಕೆ ಕಣ್ಣುರಿ?" ಎಂದು ಕಣ್ಣಿನಲ್ಲಿ ಕರೆಯಲಾರಂಭಿಸಿ ದಳು, ನನ್ನ ಚಿತ್ರಗತ ಸಖಿ. ಎದೆಯುಬ್ಬಿತು. ಆದರೆ ಚಂದ್ರ ನನ್ನ ಕೋಪಕ್ಕೆ ಹೆದರಿಯೋ ಅಥವಾ ರೋಹಿಣಿಯಿಂದ ಜಿತನಾಗಿಯೋ ಮೇಲೆ

ಮೇಲಕ್ಕೆ ಓಡುತ್ತಿದ್ದ. ರೋಹಿಣಿ ಅವನ ಮೇಲು ಸೆರಗಿನಲ್ಲಿ ಅವಿತು ಕೊಂಡಿದ್ದಳು. ಛಳಿಗೆ ಹೆದರಿ ನಾನು ವಿಜಯಗರ್ವದಿಂದ ನನ್ನ ಸಖಿಯು ಕಡೆಗೆ ತಿರುಗಿ ಅವಳ ಬಲಕ್ಕೆ ಬಾಗಿದೆ. ಅವಳ ಸ್ವರಕ್ಕೆ ನನ್ನ ಸ್ವರ ಕೂಡಿ, ಪೂರ್ಣೀ ಪರೀಕ್ಷೆಯನ್ನು ಬಿಟ್ಟು ಬಂದೆಯಾ ? ಹೋಗಲಿ ಬಾ. ನಾಳೆ ನಮ್ಮದಲ್ಲ, ಎಂದು ಬಿಗಿದಪ್ಪಲು ಕೈಗಳೆರಡನ್ನು ಅಗಲವಾಗಿ ತೆರೆ ದೆನು. ದೂರದಲ್ಲಿಯೇ ನಿಂತು ನಗುತ್ತ ನಾನಿನ್ನೂ ವ್ರತಧಾರಿ; ನನ್ನ ವ್ರತ ಮುಗಿಯಲು ಒಂದು ಮಾಸವಿದೆ. ನನ್ನನ್ನು ಮುಟ್ಟಬೇಡಿ. ಇಲ್ಲಿಂದಲೇ ನೋಡಿ ತೃಪ್ತಿ ಪಡೆಯಿರಿ ಎಂದು ಅಣಕವಾಡಿ ಪುನಃ ಚಿತ್ರಗತವಾಗಿ ಬಿಟ್ಟಳು. ಉಸಿರಿಲ್ಲದವಳಾಗಿ ಕೈಕಾಲು ಕಟ್ಟಿದ ಖೈದಿಯಂತೆ ಗಾಜಿನ ಚೌಕಟ್ಟಿನಲ್ಲಿ ಅಡಗಿಬಿಟ್ಟಳು. ನಿರ್ದಯಿ ಎಂದಾಕೆಯನ್ನು ಶಪಿಸಿ, ಶಪಿ ಸುತ್ತಲೇ ಇಡೀ ರಾತ್ರಿಯನ್ನು ಕಳೆದೆನು. ಇದು ನನ್ನ ರಾತ್ರಿಯ ವೈಭವ ಇಂತಿದೆ ನನ್ನ ರಾತ್ರಿಗಳು ''

ಅಂದೇನು, ಈಗಲೂ ನನ್ನ ರಾತ್ರಿಯು ಅಂತೆಯೇ. ಆ ಪತ್ರದಲ್ಲಿ ಬರೆದಂತೆಯೇ ಇವೆ. ಆಗ ಸಹಿಸಿಕೊಳ್ಳಲು ಸಹನೆ ಈಗಿನಷ್ಟು ಬಂದಿರ ಲಿಲ್ಲ. ಈಗ ಬರತೊಡಗಿದೆ; ನಿನಗೋ?

ಇತಿ ನಿನ್ನವನೇ.

x x x

## [೧೦]

**ಪ್ರಿಯ ಸಖಿ,**

ಮುಂಜಾನೆ ಒಂದು ಪತ್ರವನ್ನು ಬರೆದೆನು. ಆದರೆ ಇಂದು ಸಂಜೆಯೇ ಈ ಪತ್ರ ಪುನಃ ಬರೆಯುತ್ತಿರುವೆನು. ಅದೂ ಪ್ರಿಯಸಖಿ ಎಂದು ಸಂಬೋ ಧಿಸಿ. ಈ ಸಂಬೋಧನೆಯು ಬಹು ಅಮೂಲ್ಯ ಪವಿತ್ರ ಪ್ರೇಮದಿಂದ ಹೊರಹೊರಟಿದೆ. 'ಗೀತಗೋವಿಂದ' ಚಿತ್ರನೋಡಿದಾಗ ಜಯದೇವ ಪದ್ಮಾ

ವತಿಯರನ್ನು ಕಂಡೆ. ಇದೊಂದು ಹಿಂದಿ ಚಿತ್ರ. ಲೀಲಾದೇಸಾಯಿ, ಪ್ರೇಮ್ ಆದಿಬ ಇವರು ಮುಖ್ಯಪಾತ್ರ ವಹಿಸಿರುವರು. ಇದು ಜಯದೇವ ಕವಿಯ ಜೀವನ ಚರಿತ್ರೆ. ಬಹುಶಃ ನೀನು ಇದನ್ನು ಭಕ್ತವಿಜಯದಲ್ಲಿ ಓದಿರಬಹುದು. ಜಯದೇವನು ಪದ್ಮಾವತಿಯ ಗೆಜ್ಜೆಯ ನಾದದಿಂದ ಕವಿಯಾದ ಜಯದೇವನು ಉದ್ದಾಮಕವಿಯಾದನು. 'ಗೀತಗೋವಿಂದ' ಎಂಬ ಗ್ರಂಥವನ್ನು ಬರೆದನು. ರಾಧೆಯನ್ನು ಒಂದು ಸಾರಿ ಕೃಷ್ಣ ಗೀತ ಹಾಡು ಎಂದು ಹೇಳಿ ಬಲವಂತ ಪಡಿಸುವನು; ರಾಧೆಯು 'ಗೋವಿಂದ' ಎನ್ನುವಳು. ಸನ್ನಿವೇಶದ ಕಲ್ಪನೆಯಿಂದ, ಕವಿಯು ಗೀತಗೋವಿಂದವನ್ನು ರಚಿಸಿರುವನು.

ತನ್ನಲ್ಲಿ ಕಾವ್ಯದ ಹೊನಲನ್ನು ಹರಿಸಿ, ತನ್ನ ಜೀವನವನ್ನು ರಸಮಯವನ್ನಾಗಿ ಮಾಡಿದ ಜೀವನದ ಸಂಗಾತಿಯನ್ನು ಜಯದೇವನು 'ಸಖಿ' ಎಂದು ಕರೆಯುವ ಶಬ್ದ ಅದೆಷ್ಟು ಭಾವೋದ್ರೇಕವಾಗಿದೆ. **"ಜೊತೆಯಲ್ಲಿ ಬಾಳೋಣ, ಜೊತೆಯಾಗಿ ಉಳಿಯೋಣ, ಜೊತೆಯಾಗಿಯೇ ಅಳಿಯೋಣ"** ಎಂಬ ಮೂರು ಮಾತುಗಳು ಇಬ್ಬರ ಬಾಯಿಂದಲೂ ಒಂದೇ ಸಾರಿ ಬಂದಾಗ ಆ ದೃಶ್ಯ ನನ್ನ ಕಣ್ಣಲ್ಲಿ ನೀರನ್ನು ಸುರಿಸಿತು. ನನಗೂ ಅಂತಹ ಹಂಬಲ ಇಲ್ಲವೇ? ಸಾಯುವ ವರೆಗೆ ಜಯದೇವ ಪದ್ಮಾವತಿಯವರು ಕ್ಷಣವೂ ಅಗಲಿರಲಿಲ್ಲ. ಜೀವಿತೇಶನ ಕೈಯ ವೀಣೆಯಾಗಿ, ಜೀವದುಸಿರಾಗಿ, ಆತನ ಆಧ್ಯಾತ್ಮಿಕವಾಗಿ, ಆತನ ಇಹಪರವಾಗಿ, ಆತನ ದೇವಿಯಾಗಿ, ದಾಸಿಯಾಗಿ, ಭಕ್ತೆಯಾಗಿ ಪದ್ಮಾವತಿ ಬಾಳಿ ಅಳಿದಳು. ಜಯದೇವನಷ್ಟೇ ನನಗೂ ರಸಾಭಿಲಾಷೆ ಇದೆ. ಆದರೆ ಅದಿಂದು ನೀರಸವಾಗಿದೆ. ಏಕೆಂದರೆ ಸ್ಫೂರ್ತಿದೇವಿ ಮೂರು ನೂರು ಮೈಲ ದೂರದಲ್ಲಿರುವಳು. ಬಾಳದೋಣಿಯ ಬಿರುಗಾಳಿ ಇಬ್ಬರನ್ನೂ ಬೆದರಿಸಿರುವುದು. ನಾಳಿನಗತಿಯೇನೆಂಬ ಕಳವಳಕ್ಕೆ ಈಡಾಗಿರುವೆವು. ಸುಖದಾಶೆಯಿಲ್ಲದಿದ್ದರೂ ಕಷ್ಟಕ್ಕೆ ಬಹು ಬಹು ಹೆದರಿ ಹಿಂಜರಿದು ಬಾಳನೂಕುತ್ತಿರುವಾಕೆ ನೀನು.

ವಿರಹಿಯಾಗಿ ವಿಹರಿಸುತ್ತಿರುವ ನಿನ್ನನ್ನು ಮತ್ತಷ್ಟು ಭಾವಜೀವನಕ್ಕೆ ಎಳೆಯಬಾರದು. ಆದರೆ ನಿನಗಾಗಿ ಮತ್ತೇನನ್ನು ಬರೆಯಲಿ?

ಒಂದೇ ಮಾತು. ಬರೆದಿರುವ ಮಾತನ್ನೇ ಮತ್ತೊಂದು ಸಾರಿ ಬರೆಯು ವೆನು. "ಅಳು. ನುಂಗಿ ನಗುವೊಮ್ಮೆ ನಾನೂನೂ ನಕ್ಕೇನ" ಈ ಮಾತಿನ ಅರ್ಥವನ್ನು ಮಥಿಸು. ಬರುವ ಕಷ್ಟಗಳನ್ನೆಲ್ಲಾ ಇಷ್ಟಪೂರ್ತಿಯಾಗಿ ಸಹಿ ಸುವುದು ಶಿಷ್ಟರ ಲಕ್ಷಣ. ಆದ್ದರಿಂದ ಅಂಜುವುದು ಬೇಡ; ಅಳುಕುವುದು ಬೇಡ. ಬಳಕುವುದು ಬೇಡ, ಬಾಗುವುದು ಬೇಡ. ಸುಖವನ್ನು ಸ್ವಾಗತಿ ಸುವ ಮುಗುಳುನಗೆಯೇ ಕಷ್ಟವನ್ನು ಸ್ವಾಗತಿಸಲಿ. ಇದು ನನ್ನ ಜೀವನದ ಧರ್ಮ; ಹಾಗೂ ನನ್ನ ಕಾಯಕದ ಮರ್ಮ. ಇದನ್ನರಿತ ನೀನು ನನ್ನ ಜೀವನದ ಜೇನಹನಿಯಾಗಿ ಅನವರತ ಕಟ್ಟಾಗಿ ಮಧುರವಾಗಿರು.

ನನ್ನ ಸಖಿ, ರಾಘುಗೆ ಎಷ್ಟು ವರುಷ ? ಎಷ್ಟನೇ ವರುಷದ ಜಯಂತಿ? ಇದು ಇದೂ ನೆನಪಿಲ್ಲ ಅವನ ತಂದೆಗೆ. ಇಂದವನ ಜಯಂತಿ. ಅವನು ನಗು ನಗುತ್ತ ಹಸೆಯ ಮೇಲೆ ಕುಳಿತುಕೊಳ್ಳುವುದನ್ನು ನೋಡುವ ಭಾಗ್ಯ ನನಗೆ ಇಲ್ಲ. ಆಕಳಿಕೆ ಬಾಯತುಂಬಿ, ಬಾಯಿ ಹರಿಯುವಷ್ಟು ಬರುತ್ತಿದೆ. ಅವನು ಅಣ್ಣನನ್ನು ಜ್ಞಾಪಿಸಿಕೊಳ್ಳುತ್ತಿರಬಹುದು. ಇಲ್ಲಿಂದಲೇ ಹರಸುವ ಭಾಗ್ಯ ಮಾತ್ರ ನನಗಿದೆ. ಹೆಚ್ಚಿನದು ಉಗಿಲ್ಲ. ರಾಘವೇಂದ್ರರಿತ್ತ ರಾಘವನ ಕ್ಷೇಮ ಶ್ರೀ ಗುರುರಾಯರಿಗೇ ಸೇರಿದುದು. ನಿಮಿತ್ತ ಮಾತ್ರ ತಂದೆ ತಾಯಂದಿರಾದ ನಮಗೇಕೆ ಅದರ ಹಂಬಲ? ಸರ್ವಶುಭೋದಯವಾಗಲಿ. ಅವನ ಬಾಳು, ಅವನ ಶೀಲ ಇವೆಲ್ಲ ಬೆಳಗಲಿ, ಎಂದು ನಾವೀರ್ವರೂ ಅಘಟಿತ ಘಟನಾ ಸಾಮರ್ಥ್ಯವುಳ್ಳ ನಮ್ಮ ಗುರುದೇವನಲ್ಲಿ ಪ್ರಾರ್ಥಿಸೋಣ. ಹುಟ್ಟಿದ ಹಬ್ಬದ ನೆನಪಿಲ್ಲದೆ ಬೆಳೆಯುತ್ತಿರುವ ನನ್ನ ಮುದ್ದು ಲೀಲೆಗೂ ತುಂಟರ ಬಂಟನಾಗುತ್ತಿರುವ ಉದಯ ಇವರಿಗೂ ಈ ಸಮಯದಲ್ಲೇ ಶುಭಾಶೀರ್ವಾದಗಳು.

"ಸಖಿ" ಇದನ್ನೆಷ್ಟು ಸಲ ಕರೆಯಲಿ? ಜೀವನದ ಸಖಿ. ಭಾವನೆಯ ಸಖಿ, ಸುಖ ದುಃಖಗಳ ಸಖಿ; ರಾಧೆಯನ್ನು ಕೃಷ್ಣ ಸಖಿಯೆಂದು ಕರೆದನು. ಗೀತಗೋವಿಂದನನ್ನು ಜಯದೇವ ಕವಿಯು ಬರೆದ ಪುಣ್ಯವೂ ಕೀರ್ತಿಯೂ ಅವನ ಜೀವಸಖಿ ಪದ್ಮಾವತಿದೇವಿಗೆ ಸಲ್ಲಿರುವುದು. ಪೂರ್ಣೀ, ಪದ್ಮಾವತಿ ದೇವಿಯನ್ನು ಕಳ್ಳರು ಹಿಡಿದುಕೊಂಡು ಹೋಗಿ ಬಿಡುವರು; ಜಯದೇವನ

ಕಡಿದು ಬಿಡುವರು. ಇಬ್ಬರೂ ಒಮ್ಮೆಲೆ ವಿರಹಿಯಾಗಿ ಬಿಡುವರು. ಜಯದೇವ ಕವಿ ಸಹಜ ಕವಿಯಾದರೂ ಪದ್ಮಾವತಿಯ ಇನಿದಾದ ಇಂಚರವಿಲ್ಲದೆ, ಆಕೆಯ ಮಧುರ ಕಂಠದ ಇಂಪಿಲ್ಲದೆ ಆಕೆಯ ಕಾಲಿನ ಗೆಜ್ಜೆಯ ಝುಣಾತ್ಕಾರವಿಲ್ಲದೆ, ಒಂದು ಮಾತನ್ನೂ. ಬರೆಯಲಾರದೆ ಹೋದ! ರಾಧಾಕೃಷ್ಣನನ್ನು ಒಂದು ಬಾರಿ ಆನಂದದಿಂದ ಪೂಜಿಸದೆ ಹೋದನು. ಕಳ್ಳರಿಂದ ತಪ್ಪಿಸಿಕೊಂಡು ಪದ್ಮಳು ಬಂದೊಡನೆಯೇ ಜಯದೇವನ ಕಣ್ಣು ಬೊಗಸೆಗಣ್ಣಾದವು. ನೊಂದು ಕೈಯಿಂದಲೇ ಪದ್ಮನ ಮುಂಗುರಳನ್ನು ನೇವರಿಸಹತ್ತಿದನು. ಪದ್ಮ ಓಲೆಯ ಗರಿಯನ್ನು ಹಿಡಿದು ಜಯದೇವನಿಗೆ ಕವನಕಟ್ಟು ಎಂದು ಹೇಳುವಳು. ಆಗಲೂ ಕವಿದೇವನಿಗೆ ಸ್ಫೂರ್ತಿಬರಲಿಲ್ಲ. ಮೇಲೆದ್ದಳು, ಪದ್ಮ ಒಂದು ಸಾರಿ ಗಿಡದ ನೆರಳಿನಲ್ಲಿ ನಿಂತು ಮುರಳಿಯನ್ನಣಕಿಸುವ ಧ್ವನಿಯನ್ನು ತುಟಿಯಿಂದ ಹೊರನೂಕಿದಳು.

ಆಕೆಯ ಭಾವದ ಬೆಡಗು, ಕಂಠದ ನಾದ, ರೂಪಿನ ರಾಶಿ, ಇವನ್ನು ಕವಿ ನೋಡುತ್ತಲೇ ರಾಧೆಯು ನೆನಪುಬಂದಿತು. ಸ್ಫೂರ್ತಿ ಉಕ್ಕೇರಿತು. ಅವನ ಹಾಡಿಗೆ ತನ್ನ ರಾಗವನ್ನು ಸೇರಿಸಿ ಪದ್ಮ ಬರೆದು ಕೊಳ್ಳಹತ್ತಿದ್ದಳು. ನನಗೂ ಕೈ ಮುರಿದು ಹೋಗಿದ್ದರೆ, ನನ್ನ ಸಖಿ ನೀನು ಹಾಗೆಯೇ ನಾನು ಹಾಡಿದ ಕವನಗಳನ್ನು ಬರೆದುಕೊಳ್ಳುತ್ತಿದೆಯಲ್ಲವೆ? ಹಾಳು ಕೈ ಮುರಿಯಲಿಲ್ಲ. ಕೈ ಮುರಿದರೂ ಜಯದೇವ ಕವಿಯಂತಾದರೆ ಸಾಕು. ಇಲ್ಲದಿದ್ದರೆ ಬೇಡಪ್ಪ ಬೇಡ. ಪ್ರೇಮ ಭಕ್ತಿ ಎಂಬುದರ ನಿರೂಪಣೆ ಅದೆಷ್ಟು ಭಾವನಾಮಯವಾಗಿದೆ? ಸತಿಪತಿಗಳ ಪ್ರೇಮದಲ್ಲಿ, ಭಕ್ತಿಯಲ್ಲಿ, ಮುಕ್ತಿ ಇದೆ, ಅನುರಾಗವಿದೆ, ಜಗತ್ತಿನ ಕಲ್ಯಾಣವಿದೆ. ಗೀತಗೋವಿಂದ ಇದರ ಸಜೀವ ಸಾಕ್ಷಿ. ಜಯದೇವ ಕಲಿಯುಗದವನೇ. ಅವನಂತೆ, ಅವನ ಸಖಿ ಪದ್ಮಳಂತೆ ನಾನು ನಿನೇಕಾಗಬಾರದು? ಇದನ್ನು ಗುರುದೇವನಲ್ಲಿ ಪ್ರಾರ್ಥಿಸು. ಇಂದಿನ ಜನ್ಮದಲ್ಲಿ ಸಾಧಿಸದಿದ್ದರೂ ಮುಂದಿನ ಜನ್ಮದಲ್ಲಾದರು ಅಂತಹ ಭಾವಜೀವಿಗಳಾಗೋಣ. ಭಕ್ತಿಜೀವಿಗಳಾಗೋಣ, ಪ್ರೇಮಜೀವಿಗಳಾಗೋಣ. ಸತ್ಯ ಪದ್ಮಳನ್ನು ಬದುಕಿಸಿಕೊಂಡ ಗೀತಗೋವಿಂದವನ್ನು ರಚಿಸೋಣ. ಈಗ ನಾನು ಬರೆದಿರುವ ಬಾಲಗೋಪಾಲ ಎಂಬ ಕವನಕ್ಕೆ ರಾಘವೇಂದ್ರ ಗುರುವರೇಣ್ಯರ ಅಂಕಿತ

ವಾದರೆ ಅದೂ ಗೀತಗೋವಿಂದದಷ್ಟೇ. ಪ್ರಖ್ಯಾತಿಯಾಗುವುದೆಂಬುದು ನನ್ನಾಸೆ; ನಗಬೇಡ. ಆ ಗುರುರಾಯನು ಮನಸ್ಸು ಮಾಡಿದರೆ ಇದು ಎಷ್ಟರದು?

ಸತಿಯ ಹೆಗಲ ಮೇಲೆ ಕೈ ಹಾಕಿದ ಕೂಡಲೆ ಪ್ರೇಮದ ಬುಗ್ಗೆಯು ಭಕ್ತಿಯ ಬಾಂಧಾರವು ಕೈವಶವಾಗುವುದೆನ್ನುವಾಗ, ಅಂತಹ ಸತಿಯಿಂದ ಕಾಮದೂಟವನ್ನು ಮಾತ್ರ ಪಡೆಯುತ್ತಿರುವ ನಾವು ಪತಿತರಲ್ಲವೇನು? ಜಯದೇವ ಪದ್ಮಾವತಿಯರ ಚಿತ್ರ ನನಗೆ ಹಗಲಿರುಳೂ ಕಾಣಿಸುತ್ತಿರುವುದು. ಕುಳಿತರೆ, ನಿಂತರೆ, ಮಲಗಿದರೇ ಅವರೇ ನಾನು ಜಯದೇವ, ನೀನು ಪದ್ಮಳಾಗಿ ನನ್ನ ಕವನವೆಂಬ ವೀಣೆಯ ಬುರುಡೆಗೆ ನೀನು ತಂತಿಯಾಗುವೆ.

ಇತಿ ನಿನ್ನ ಭಾವದೇಶ್ವರ

x x x

## [೧೧]

ಪ್ರಿಯೆ,

ಈಸೂರಿನಿಂದ ಬರೆದ ಪತ್ರ ನಿನಗೆ ತಲುಪಿರಬಹುದು. ಅವಸರದಲ್ಲಿ ಬರೆದೆ. ಇದೀಗ ವಿವರಯುತ ಪತ್ರವನ್ನು ಹಂಸಭಾವಿಯಲ್ಲಿ ಮರದಡಿಯಲ್ಲಿ ನಿಂತಿರುವ ಕಾರಿನ ಒಳಗಡೆ ದಿಂಬಿಗೆ ಆತುಕುಳಿತು ಬರೆಯುತ್ತಿರುವೆನು. ಊಟದ ಹೊತ್ತಿನ ವರೆಗೂ ಬರೆಯುವೆನು. ಈಗ ಮುಂಜಾನೆ ೧೦–೩೦; ಒಂದು ನೂರು ಪುಟಗಳ ಬರೆಯುವ ಸಾಹಿತ್ಯ ತುಂಬಿದೆ, ಸ್ಫೂರ್ತಿ ಬಂದಿದೆ. ಹುರುಪು ತುಂಬಿರುವುದು. ಮಲೆನಾಡಿನ ನನ್ನ ಈ ಅಲೆದಾಟದಿಂದ ನನ್ನಲ್ಲಿ 'ಗೀತ ಗೋವಿಂದ' ಧ್ವನಿಸಿದ್ದ ಕವಿತಾಸ್ಫೂರ್ತಿಗೆ ಸಾಣೆ ಬಂದಿರುವುದು. ತಾಳು ಸಖಿ, ಪ್ರವಾಸದಿಂದ ಪ್ರಯಾಸಗೊಂಡ ಲೇಖನಿಯು ರಸ ಚಿಮ್ಮುತ್ತಿಲ್ಲ. ಪಕ್ಕದಲ್ಲಿರುವ ಕಿತ್ತಳೆ ಹಣ್ಣಿನ ರಸವನ್ನು ತುಂಬಿಕೊಂಡು ಬರೆಯುವೆನು.

ರಸ ಕುಡಿದ ಮೇಲೆ ರಸಿಕನಾಗಿ ಪತ್ರವನ್ನು ಪ್ರಾರಂಭಿಸಿರುವೆನು. ಆದರೆ ನನ್ನ ರಸದ ಇಂಚರಕ್ಕೆ ಧ್ವನಿಗೂಡಿಸುವ ಪೀಣೆಯು ಬುರುಡೆಯು ತಂತಿ ಕಿತ್ತು, ತಾಳದಪ್ಪಿ ದೂರ ದೂರ ಬಹುದೂರ ಮೊಂಡುತನದಿಂದ ಕುಳಿತಿದೆ. ಹೋಗಲಿ ವೀಣೆ ಇಲ್ಲದಾಗ ವೀಣೆ ಇಲ್ಲವೆಂದು ಹಲುಬಿದರ ಫಲವೇನು? ಇದು ಸದಸದ್ವಿವೇಕವಲ್ಲವೆ? ಪ್ರಿಯ ಸಖಿ ನಾನು ಮಾತಿಗೆ ತಪ್ಪಿದೆನೆ? ಸಾಗರಕ್ಕೆ ಹೋದರೂ ಸಾಗರದ ಕನ್ಯೆಯನ್ನು ನೋಡುವುದಿಲ್ಲವೆಂದು ಬರೆದಿದ್ದೆನಲ್ಲವೆ? ಆದರೆ ಅಲ್ಲಿನ ಪರಿಸ್ಥಿತಿ, ನನ್ನನ್ನು ನಿರ್ಬಂಧಗೊಳಿಸಿತು. ತಪ್ಪೇನು? ನಿನ್ನ ಸ್ನೇಹಿತೆಯನ್ನು ನಿನ್ನ ಪರವಾಗಿ ನಿನ ಅರ್ಧಾಂಗನೇಕೆ ಸರ್ವಾಂಗನಾದ? ನಾನು ಮಾತನಾಡಿಸಬಹುದಲ್ಲವೆ? ಆಕೆಯು ಒಂದು ಸಲ ಸಹಜ ಬಾಯಿಬಿಟ್ಟು ನಗೆ, ಆಕೆಯ ತಂಗಿಯದೊಂದು ಎಳೆ ನಗೆ, 'ತಾಯಿಯ ಮಮತೆ ಪೂರಿತ ನಾಲ್ಕಾರು ಮಾತುಗಳು ಇವಿಷ್ಟು ಕೆಲವು ನಿಮಿಷಗಳಲ್ಲಿ ಮುಗಿದವು. ನಂತರ ಬೀಳ್ಕೊಡುವ ವೈಯಾರವಳಗಿನಿಂದಲೇ. ರಾತ್ರಿ ಜೋಗಿಗೆ ಹೋಗುವ ದಾರಿಯಲ್ಲಿರುವ ಸಿರಿವಂತಿಕೆ ಎಂಬೂರಿನಲ್ಲಿ ಉಳಿದುಕೊಂಡೆವು. ಸಿರಿವಂತಿಕೆ ನಿಜವಾಗಿ ಸಿರಿಯ ಹಿರಿಯೂರು. ನಾವಿಳಿದಿದ್ದ ಮನೆಯಲ್ಲಿ ತುಂಬ ಸಿರಿಯ ಹಿರಿಯ ಸೊಸೆತನ.

ನಿನ್ನ ಸ್ನೇಹಿತೆ ಮಲೆನಾಡಿನವಳು ತಾನಂದು ಮರೆತು ಹೇಳುತ್ತಿದ್ದ ಮಾತು ಸ್ವಲ್ಪ ಮಟ್ಟಿಗೆ ನಿಜವೆಂದು ಅನ್ನಿಸುತ್ತಿದೆ. ಮಲೆನಾಡಿನ ಎಲೆ ಎಲೆಗಳಲ್ಲಿ, ಗಿಡ ಗಿಡಗಳಲ್ಲಿ ಸೃಷ್ಟಿ ಸೌಂದರ್ಯದ ತನಿರಸವು ತುಂಬಿರುವುದು. ನಿಸರ್ಗದೇವತೆಯ ತವರೂರು ಈ ಮಲೆನಾಡು. ಮಾತನಾಡದೆ, ಮೌನದಿಂದ ವನದೇವತೆಯು ನಮ್ಮ ಮನವನ್ನು ಸೂರೆಗೊಳ್ಳುವಳು. ಭವ್ಯವಾದ ಕಾರಿನಲ್ಲಿ ಕುಳಿತಿರುವುದೇ ಒಂದು ಸೊಗಸು. ಅದರ ವೇಗವು ಸೊಗಸಿಗೆ ಹುರುಪುಕೊಡುವದು. ಮಲೆನಾಡ ಗೌಡರ ಆದರ ಅತಿಥ್ಯವೆಂದರೆ ಬಣ್ಣಿಸಬರದಷ್ಟು ಭವ್ಯ. ಮತ್ತೆ ಮತ್ತೆ ಆಶಿಸುವಷ್ಟು ರುಚಿ. ಇವೆಲ್ಲಕ್ಕಿಂತಲೂ ಮನವನಪ್ಪಿದ ಮನ ನೋಡದ ದೃಶ್ಯಗಳು. ಒಂದಲ್ಲ ಎರಡಲ್ಲ ನೂರಾರು. ಭಾವನಾಜೀವಿಯಾದ ನನಗೆ ಅವರ ಬದುಕಿನ ಒಂದೊಂದು ಬಗೆಯೂ ವೈಮರೆಸುತ್ತಿತ್ತು. ನಡುಕಾಡಿನಲ್ಲಿದ್ದರೂ

ವನವಿಹಾರಕ್ಕೆಂದು ಬಂದ ಭೋಗ ಜೀವಿಗಳಂತೆ ಜೀವನದ ಹೆಜ್ಜೆ ಹೆಜ್ಜೆ ಯಲ್ಲೂ ರಮಿಸುತ್ತಿರುವರು, ವಿಹರಿಸುತ್ತಿರುವರು, ವಿನೋದಿಸುತ್ತಿರುವರು; ತೃಪ್ತಿ ಜೀವಿಗಳವರು. ಮೈತುಂಬ ದುಡಿದರೆ ಕೈತುಂಬಉಣ್ಣುವರು. ಅಡಿಕೆ ಬಾಳೆ, ತೆಂಗುಗಳ ತೋಟ ಇವರ ದುಡಿಮೆಯ ಕಣವೂ ಹೌದು, ಜೀವ ನದ ಉದ್ಯಾನವನವೂ ನಿಜ. ಸೂರ್ಯನೂ ಕೂಡ ಇವರ ಸುಖವನ್ನು ಇಣಿಕಿ ನೋಡುತ್ತಿರುವನು. ಈ ಉದ್ಯಾನವನದಲ್ಲಿ, ಮೇಲಿಂದ ಸಂದು ಸಂದುಗಳಲ್ಲಿ ತಲೆಹಾಕಿ ನೋಡುತ್ತಿರುವ ಸೂರ್ಯನ ಪರಿವೆ ಇಲ್ಲದೆ ಈ ಮಲೆನಾಡಿನವರು ಈ ಸಿಂಗರಿಸಿದ ವನದಲ್ಲಿ ತಾವು ನೀರೆರೆದು ಬೆಳೆದ ಎಲೆಯ ಚಿಗುರು, ಅಡಿಕೆಯಚೂರು, ಇವುಗಳನ್ನು ಜಗಿಯುತ್ತಾ ಬಳ್ಳಿಗಳಂತೆ ಬಳಕುತ್ತಿರುವ ತಮ್ಮ ಜೀವನದ ಸಂಗಾತಿಯರೊಂದಿಗೆ ತಗ್ಗು ದಿನ್ನೆಗಳನ್ನು ಇಳಿದೇರುತ್ತ ಬಾಳುತ್ತಿರುವುದನ್ನು ನೋಡಿದ ಬಲವಂತ ವಿರಹಿಯಾದ ನನಗೆ, ಮುಂದಿನ ಹುಟ್ಟು ಮಲೆನಾಡಿನಲ್ಲಾಗಲಿ ಎಂದೆನ್ನಿಸಿತು.

ವನಸುಮದಂತೆ ಅರಳಿ ಬಾಡುವ ಈ ಮಲೆನಾಡಿಗರಿಗೆ ಬಾಳು ಶೂನ್ಯವೆಂದನ್ನುತ್ತಿದ್ದ ನಾನು ನನ್ನ ತಪ್ಪನ್ನು ತಿದ್ದಿಕೊಂಡೆನು. ಒಣಬಾಳು ಇವರದಲ್ಲ ನಮ್ಮದೆಂದು ಅರಿತುಕೊಂಡೆನು. ಪಟ್ಟಣಿಗರ ಜೀವನ, ನಾಗರಿ ಕತೆ, ಇವೆಷ್ಟು ಕೃತ್ರಿಮಪೂರ್ಣವಾದವು. ಸತ್ಯದ ಮಾತಿರಲಿ, ಹುರುಳಿಲ್ಲದ ತಿರುಳಿಲ್ಲದೆ ಬಿಸಲಿಗೆ ಬಾಡುವ, ಛಳಿಗೆ ಮುದುಡುವ ನಮ್ಮ ನಾಗರಿಕತೆ ಯಲ್ಲಿದೆಯೇ ರಸ? ಮಳಲಗದ್ದೆ ಎಂಬೊಂದೂರು. ಅಲ್ಲಿನ ಗೌಡರ ಮನೆಯಲ್ಲಿ ಶುಭ ಶೋಭನ. ಈ ಶೋಭನಕ್ಕೆ ನಾವು ಹೋದಾಗ ಅವರಿಗಾದ ಆನಂದ ವನ್ನು ಬಣ್ಣಿಸಲು ಬರದು. ಸಡಗರದ ಗುಡುಗಾಟ ಅಡವಿಯಲ್ಲೆಲ್ಲಾ ಪ್ರತಿಧ್ವನಿಸುತ್ತಿತ್ತು. ದಪ್ಪಾದಪ್ಪೇ ಮೃದು ಹೃದಯವಿರುವ ಗೌಡತಿ ನಮಗೆ ಬಡಿಸಹತ್ತಿದಾಗ, ಅಧಿಕಾರವಾಣಿಯಿಂದ ನಮ್ಮನ್ನು ಗದ್ದರಿಸುತ್ತ ತಿಂಡಿ ತಿನಸುಗಳನ್ನು ಎಲೆಗೆ ನೂಕುತ್ತಿರುವಾಗ, ಅಮ್ಮನ ನೆನಪು ನನಗಾಗಿ ಹನಿಗಣ್ಣಾಯಿತು. ನಾನು ಒಬ್ಬ ಅಮ್ಮನ ಕುವರನಲ್ಲ ನನ್ನ ಅಮ್ಮಂದಿರು ನಾಡಿನ ತುಂಬಿರುವಾಗ ನನಗೇಕೆ ಈ ನೋವು ಎಂದು ಸಂತೈಸಿ ಕೊಂಡೆನು.

ಪೂರ್ಣೀ ಮದುವೆಯ ಮನೆಗೆ, ಶಾಂತಿ ಪ್ರಸ್ತುದ ಸಮಾರಂಭಗಳಿಗೆ ನನ್ನಂತಹ ಭಾವ ಜೀವಿ ಹೋಗಬಾರದು; ಹೋದುದಾಯಿತು. ತೆರೆ ತೆರೆಯಾಗಿ ಏಳುತ್ತಿರುವ ಭಾವನೆಗಳ ಏರಿಳಿತಗಳಿಗೆ ಎಡೆಯೊಡ್ಡಿಯಾಯಿತು. ಈ ನನ್ನ ನಾಲ್ಕು ದಿನಗಳ ನೂರಾರು ಮೈಲಿಯ ಸಂಚಾರದ ಪ್ರತಿನಿಮಿಷವೂ ಜೀವನದ ರಸನಿಮಿಷಗಳಾಗಿದ್ದವು. ನಾಡಿಯನ್ನು ಮಿಡಿಯುವ ಘಳಿಗೆಯಾಗಿದ್ದವು. ಒಂದೆಡೆ ಒಬ್ಬ ಗೌಡರ ಹಿತ್ತಲಲ್ಲಿ ಒಂದೇ ಗುಲಾಬಿಯ ಸಸಿಯಲ್ಲಿ ಒಂದೇ ಕೆಂಪನೆಯ, ಪೆಂಪಿನ ಸೊಂಪಿನ ಕಂಪಿನ ಗುಲಾಬಿ ಅರಳಿ ಬಿರಿಯುತ್ತಿದ್ದಿತು. ಬೀಗುತ್ತಿದ್ದಿತು. ಅದನ್ನು ನೋಡಿದಾಗ ನನ್ನ ಜೊತೆಯಲ್ಲಿದ್ದ ಒಬ್ಬ ಸ್ನೇಹಿತರಿಗೆ ಈ ಗುಲಾಬಿ ಎಷ್ಟು ಚೆನ್ನು ಎಂದೆ. ·ಕಿಟಕಿಯಿಂದ ಜೀವನ ಗುಲಾಬಿಯೊಂದು ಈ ಮಾತನ್ನು ಕೇಳುತ್ತಿತ್ತು. ಸ್ವಲ್ಪ ಹೊತ್ತಿನ ನಂತರ ಗಿಡದ ಗುಲಾಬಿ, ಸಣ್ಣ ಮಗುವಿನ ಮೂಲಕ ನನ್ನ ಕೈಗೆ ಬಂದಿತು. ನಾನು ಮೈಮರೆತೆ ಗುಲಾಬಿಯನ್ನು ಮೂಗಿಗಾನಿಸಿದಾಗ. ಇದು ಸಾಗರದಲ್ಲಲ್ಲ! ಸೋಲೂರಿನಲ್ಲಿ. ಬಾಳೆಯ ವನದಲ್ಲಿ ಬೆಳೆದಿರುವ ಬಾಲೆಯರನೇಕರು ಬಾಳಿನ ಪಾಲುಗಾರನಿಗಾಗಿ ದಾರಿಕಾಯುತ್ತಿರುವರು. ಎಳೆ ಮನದಲ್ಲಿ ಬಾಳೆಯ ಸುಳಿಯಂತೆ ಬಯಕೆಗಳು ಮೂಡುತ್ತಿರುವ ಈ ಎಳೆ ಹುಡುಗಿಯರ ಹೃದಯದ ಬಡಿತವು, ಮುಖದ ಮುಗುಳು ನಗೆಯು, ಕಣ್ಣಿನ ಸರಳತೆಯೂ ತಪಸ್ವಿಯನ್ನಾದರೂ ದೀನವದನನ್ನಾಗಿ, ದರಿದ್ರನನ್ನಾಗಿ, ಮಾಡಿಬಿಡುವವು. ಭಯ ಬೇಡ. ನನ್ನ ವದನ ದೀನವಾಗಿದ್ದರೆ, ಇವರ ಬಾಳಿಗೆ ರಸವೆರೆಯುವ ರಸಿಕ ಜೀವಿತೇಶನು ದೊರೆತಿಲ್ಲವೆಂಬ ಮರುಕದಿಂದ. ನಾನು ದರಿದ್ರನಾಗಿದ್ದರೆ, ಇವರನ್ನು ಬಣ್ಣಿಸಲಾರದಷ್ಟು ಸಾಹಿತ್ಯ ಶೂನ್ಯವಾದುದರಿಂದ. ನನ್ನೀ ಇಳಿ ವಯಸ್ಸಿನಲ್ಲಿ ಎಳೆ ಹುಡುಗಿಯರನ್ನು ನೋಡುವ ದೃಷ್ಟಿಯಲ್ಲಿ, ಅಣ್ಣನು ತಂಗಿಯನ್ನು ತಂದೆಯು ಬೆಳೆಯುವ ಮಗಳನ್ನು ನೋಡುವ ಭಾವನೆ ಇರುವುದೆಂಬುದನ್ನು ಅರಿತು, ನೀನು ನನ್ನ ಬಣ್ಣನೆಯಿಂದ ಬಣ್ಣಗೆಡಬೇಡ.

ಮಲೆನಾಡ ಸೌಂದರ್ಯದ ಮತ್ತಿನಲ್ಲಿ ನನ್ನ ನೆನಹಿನ ಪರದೆಯು ಅತ್ತ ಸರಿದಿಲ್ಲ. ಆದ್ದರಿಂದ ಈ ಪತ್ರದ ಸಾಹಿತ್ಯದೊಂದಿಗೆ ಹಳೆಯ

ಚಿತ್ರವನ್ನು ಬಿರಸದೆ ಪತ್ರವನ್ನು ಮುಗಿಸುತ್ತಿದ್ದೇವೆ. "ನೆಲ್ಲುಂಟು ನೀರುಂಟು ಒಲ್ಲೆನುವ ನಲ್ಲೆಯರು ಅಲ್ಲುಂಟು" ಎಂದು ನೀನು ನನಗೊಮ್ಮೆ ಮಲೆನಾಡಿನ ಪರಿಚಯವನ್ನು ಮಾಡಿಕೊಡುತ್ತ ಓರ್ವ ಮಲೆನಾಡ ಹುಡುಗಿಯ ಬಿಂಕವನ್ನು ಬಣ್ಣಿಸಿದ್ದೆ. ನೀವು ಮಲೆನಾಡಿಗೆ ಹೋದೀರಿ ಎಂದು ಎಚ್ಚರಿಸಿದ್ದ ಆ ಪತ್ರ ನೆನಪಿಗೆ ಬಂದೇಬಿಟ್ಟಿತು. ಅದಕ್ಕೆ ಉತ್ತರದಂತಿದೆ ಯಲ್ಲವೆ ನನ್ನ ಮೇಲಿನ ಪತ್ರ? ಒಮ್ಮೆಯಾದರೂ ಬಾಳಿನ ಬವಣೆಯನ್ನು ಮರೆತು ಸೃಷ್ಟಿ ಸೌಂದರ್ಯದ ಚಿಂತನದಲ್ಲಿ ತನ್ಮಯಳಾಗು.

ಇತಿ ನಿನ್ನ ಜೀವ ಸಖ

x x x

[೧೨]

ಪ್ರಿಯ ಪೂರ್ಣೀ,

ಹಂಸಭಾವಿಯಿಂದ ಬರೆದ ಈ ಹಿಂದಿನ ಪತ್ರದಲ್ಲಿ ಮಲೆನಾಡನ್ನು ಕುರಿತು ಅಷ್ಟೊಂದು ಬಣ್ಣಿಸಿರುವುದು ನಿನಗೆ ಸೇರಿಲ್ಲವೆಂದನ್ನಿಸಿದೆ ಆದ್ದರಿಂದ ಸಿಡುಕಗೊಂಡ ಹೆಂಡತಿ ಅಡಿಗೆಯ ಮನೆಯಲ್ಲಿ ಪಾತ್ರೆಗಳನ್ನು ಕುಕ್ಕುವಂತೆ ನೀನು ನಿನ್ನಿನ ಪತ್ರವನ್ನು ಬರೆದಿರುವಿ. ಉಪ್ಪು, ಹುಳಿ ಕಾರವಿಲ್ಲದ ಆ ಪತ್ರವನ್ನು ನೋಡಿದ ಕೂಡಲೇ, ಸಿಟ್ಟು ಬಂದಾಗ, ಉದ್ದವಾಗುವ ನಿನ್ನ ಮೋರೆಯ ಚಿತ್ರವು ಕಣ್ಣಿಗೆ ಕಟ್ಟಿತು.

ಇಲ್ಲ. ನೀನೆಷ್ಟು ಜಂಭ ಕೊಚ್ಚಿಕೊಂಡರೂ ಈ ಒಂದು ವಿಷಯದಲ್ಲಿ ಮಾತ್ರ ನೀನು ಇತರರಂತೆ ಗಂಡನನ್ನು ನಂಬಲಾರದವಳೇ. ಆದರಲ್ಲೂ ಆ ಮಲೆನಾಡ ಹುಡುಗಿಯ ನೆನಹು ಬಂದಿತೆಂದರೆ ತೀರಿಯೇ ತೀರಿತು. ನಿನ್ನ ಒಳ್ಳೆಯ ಗುಣಗಳೆಲ್ಲಾ ತೆಳ್ಳಗಾಗಿ ಬಿಡುವವು; ನಾನೂ ಬೆಳ್ಳಗಾಗಿ ಬಿಡುವೆನು.

ನಾನು ಮಲೆನಾಡಿಗೆ ಹೋದ ಮೇಲೆ ಅಲ್ಲಿಗೇ ಹೋಗಿಬಂದಿರುವೆ ನೆಂದೇ ನಿನ್ನ ನಂಬಿಕೆ. ಇಲ್ಲವೆಂದು ಆಣೆ ಮಾಡಿದರೂ ನಂಬುವಂತಿಲ್ಲ. ಆದೇಕೆ ಆ ಊರಿನಲ್ಲಿ ಇದ್ದ ಒಂದು ಘಂಟೆಯ ಹೊತ್ತಿನಲ್ಲಿ ಅರ್ಧ ಘಂಟೆ ಅವರ ಮನೆಯಲ್ಲೇ ಕಳೆದೆನು. ಉಪಾಯವಿಲ್ಲ. ನಾನಾಗಿ ಅವರ ಮನೆಗೆ ಹೋಗಲಿಲ್ಲ. ಆ ಹುಡುಗಿಯ ಅಣ್ಣ ದಾರಿಯಲ್ಲಿ ಸಿಕ್ಕಿದನು. ಮನೆಗೆ ಬರಲೇಬೇಕೆಂದು ಹಠ ಹಿಡಿದನು. ನಾನು ನಿನ್ನಷ್ಟು ಹಠಮಾರಿಯಲ್ಲ. ಇಲ್ಲವೆನ್ನುವುದಕ್ಕೂ ಆಗಲಿಲ್ಲ. ಆತನನ್ನು ಹಿಂಬಾಲಿಸಿದೆನು. ಎದುರಿಗೇ ಆ ಹುಡುಗಿಯೂ ಬಂದಳು. ಎಲ್ಲರೂ ಕೂಡಿಕೊಂಡು ಮನೆಗೆ ಹೋದೆವು.

ಕೊಟ್ಟ ಕಾಫಿಯ ಬಿಸಿ ಆರುವವರೆಗೆ ನಾನು ಅವರೆಲ್ಲರೊಂದಿಗೆ ಮಾತನಾಡಿದೆನು. ನಿನ್ನ ಸ್ನೇಹಿತೆಯೂ ಮಾತನಾಡಿದಳು. ನಿನ್ನ ಯೋಗ ಕ್ಷೇಮವೇ ಆಕೆ ಕೇಳಿದ ಪ್ರಶ್ನೆ. ಕೊನೆಗೆ ಧೈರ್ಯಮಾಡಿ ತಾವೆಷ್ಟು ಪತ್ರ ಬರೆದಿರಿ ನನ್ನ ಅಕ್ಕನಿಗೆ. ಎಂದು ಉಗುರು ಕಚ್ಚುತ್ತಾ ಈ ತೆಳ್ಳನೆಯ ಹುಡುಗಿ ಮೆಲ್ಲನೆ ನಗುತ್ತಲೇ ಕೇಳಿದಳು. ನನಗೆ ನೆನಪಾಯಿತು ನೀವಿಬ್ಬರೂ ಮೈಸೂರಿನಲ್ಲಿ ಕಾಲೇಜು ಹಾಸ್ಟಲಿನಲ್ಲಿದ್ದಾಗ ಮೂರುದಿನಕ್ಕೊಮ್ಮೆ ಆರಾರು ಪುಟದಲ್ಲಿ ಬರುತ್ತಿದ್ದ ನನ್ನ ಪತ್ರಗಳನ್ನು ಈ ಹುಡುಗಿ ತೂಕ ಮಾಡುತ್ತಿದ್ದಳೆಂಬುದು. ನೀನು ಪತ್ರ ಓದಿದಷ್ಟು ಕೀಟಲೆ ಮಾಡುತ್ತಿದ್ದಳು. ರೂಮ್‌ಮೇಟ ಆಗಿದ್ದರಿಂದ ಕೆಲವು ಪತ್ರಗಳನ್ನು ಕದ್ದು ಓದಿರಬಹುದು, ಎಂದು ನೀನು ಹೇಳುತ್ತಿದ್ದೆಯಲ್ಲವೆ? ಅಲ್ಲದೆ ಕೆಲವು ಪತ್ರಗಳಲ್ಲಿನ ಹಲವು ವಿಷಯಗಳನ್ನು ನೀನೇ ಈ ಹುಡುಗಿಗೆ ಓದಿ ಹೇಳಿ ನಿನ್ನ ಗಂಡನ ರಸಿಕತನ ವನ್ನು ಕೊಚ್ಚಿಕೊಳ್ಳುತ್ತಿದ್ದೆಯೆಂದು ನೀನು ಆಗಿಂದಾಗ್ಗೆ ಈ ಮದುವೆಯಾಗದ ಕನ್ಯೆಯ ಬಗ್ಗೆ ಹೇಳುತ್ತಲೂ ಇದ್ದೆ. ಬರೆಯುತ್ತಲೂ ಇದ್ದೆ. ಅದೇ ಸಲಿಗೆ. ಮತ್ತು ನಮ್ಮ ಮನೆಯಲ್ಲಿ ಬಂದು ಇದ್ದ ಐದಾರು ದಿನಗಳ ಪರಿಚಯ, ಇವುಗಳಿಂದಾಗಿ ಈ ಹುಡುಗಿ ನನ್ನ ಪತ್ರ ಜೀವನದ ಬಗ್ಗೆ ತುಟಿತೆರೆದಳು. ಆಗ ಸರಿಯಾಗಿ, ಧೈರ್ಯವಾಗಿ ಕತ್ತೆತ್ತಿ ನೋಡಿದೆನು. ಕಣ್ಣು ಕಣ್ಣನ್ನು ನೋಡಿದವು. ಮುಖ ಮುಖವನ್ನು ನೋಡಿತು. ಪೂರ್ಣಿ, ಬರೆಯುತ್ತಿರುವ ನನ್ನ ಲೇಖನಿಯನ್ನು ವಂಚಿಸಲಾರೆ. ಒಂದು ನಿಮಿಷದ ಆಕೆಯ

ನೋಟದಲ್ಲಿನ ಹಸಿವು ನನ್ನನ್ನು ಸುಡಲಾರಂಭಿಸಿತು. ನಾನು ಅದುವರೆಗೆ ಅಷ್ಟು ಚಪಲ ದೃಷ್ಟಿಯಿಂದ ಯಾರನ್ನೂ ನೋಡಿರಲಿಲ್ಲ. ಅಂದು ನೀನು ಸಿಟ್ಟುಮಾಡಿಕೊಂಡುದುದು ಸರಿಯೇ ಎನ್ನಿಸುವುದು. ಅದೇ ಸಿಟ್ಟು ನನ್ನನ್ನು ಅಂದು ಕಾಪಾಡಿತು. ಅದರ ನೆನಪಾಗದಿದ್ದರೆ, ಮತ್ತೇನೂ ಅನಾಹುತ ಸಂಭವಿಸದಿದ್ದರೂ ನಾನು ಆಕೆಯನ್ನು ಪಾಪದ ದೃಷ್ಟಿಯಿಂದ ಮತ್ತೊಮ್ಮೆ ನೋಡಿಬಿಡಲು ಮನಸ್ಸು ಮಾಡುತ್ತಿದ್ದೆ. ತಡವರಿಸಿಕೊಂಡು ಚೇತರಿಸಿಕೊಂಡು. ಈ ಹುಡುಗಿಯ ಪ್ರಶ್ನೆಗೆ ಉತ್ತರ ಕೊಡಲು ಯತ್ನಿಸಿದೆ. ನಾನು ಉತ್ತರ ಕೊಡುವ ವರೆಗೂ ಆಕೆ ತನ್ನ ಅರಳಿದ ತುಟಿಯ ಮೇಲೆ ಲಾಸ್ಯವಾಡುತ್ತಿದ್ದ ಆ ತುಂಟ ತಿಳಿನಗೆಯನ್ನು ಹಿಂದಕ್ಕೆ ತೆಗೆದು ಕೊಳ್ಳಲೇ ಇಲ್ಲ.

ನನಗೆ ಪೇಚಾಟಕ್ಕಿಟ್ಟುಕೊಂಡಿತು. ನನ್ನ ರಸಿಕತನದ ದಿವಾಳಿಯಾಗುವುದು. ಅದೂ ಮೂಗು ಬಲಿಯದ ಮಲೆನಾಡಿನ ಹುಡುಗಿಯ ಮುಂದೆ ರಸ ಮತ್ತು ಅಲಂಕಾರಿಕ ಶಬ್ದಗಳನ್ನು ಆಗ, ಅಲ್ಲಿ ಉಪಯೋಗಿಸುವದಕ್ಕೂ ಭಯವಾಗಿದ್ದಿತು. ಆ ಅಗಲವಾದ ಕಣ್ಣುಗಳಲ್ಲಿ ದಂಡಕಾರಣ್ಯವನ್ನು ತಿಂದು ತೇಗುವಷ್ಟು ಹಸಿವಿದ್ದಿತು. ಬಕಾಸುರನ ಹಸಿವಿಗಿಂತ ಈ ಬಲಿತ ಹುಡುಗಿಯ ಹಸಿವು ಹೆಚ್ಚಾಗಿ ಕಾಣುತ್ತಿದ್ದಿತು. ಆದ್ದರಿಂದ ನಾನು ಸುಲಭವಾಗಿಯೇ ಉತ್ತರ ಕೊಡುತ್ತಾ ಈಗ ಪೂರ್ಣಿಗೆ ಪರೀಕ್ಷೆಯ ಕಾಲ. ಹೆಚ್ಚು ಪತ್ರ ಬರೆದು ಅವಳ ಓದಿನ ವೇಳೆಯನ್ನು ಕಳೆಯಲು ಇಷ್ಟವಿಲ್ಲ. ಬರಿಯ ಯೋಗಕ್ಷೇಮ ಉಭಯ ಕುಶಲೋಪರಿ ಸಾಂಪ್ರತ ಇದಿಷ್ಟನ್ನೇ ಬರೆಯುವೆನು ಎಂದುತ್ತರಕೊಟ್ಟೆನು. ಇಷ್ಟಕ್ಕೆ ಮುಗಿಯಿತೆಂದು ತಿಳಿದುಕೊಂಡಿದ್ದೆನು. ಆ ತುಂಟ ಹುಡುಗಿ ಮತ್ತು ತುಟಿತೆರೆದಳು. ನಾಲಗೆ ನೂಕಿದಳು. "ಹೊ, ಹೊ, ಬಾಬುಜೀ ಹಾಗಾದರೆ ಅಕ್ಕನು ಪರೀಕ್ಷೆ ಪಾಸು ಮಾಡಿದಂತೆಯೇ, ಯುವರ್ ಲೆಟರ್ಸ್ ಆರ್ ಹರ್ ಲೈಫ ಆಂಡ ಸ್ಪಿರಿಟ, ಪ್ಲೀಜ್ ಪ್ಲೀಜ್ ನನ್ನ ಸಲುವಾಗಿ ಇಂದೇ ಒಂದು ಎಕ್ಸಪ್ರೆಸ್ ಡೆಲಿವಿರಿ ಬರೆದು ಹಾಕಿರಿ," ಎಂದು ಏನೋ ತಪ್ಪು ಮಾಡಿ ಕ್ಷಮೆ ಬೇಡುವಂತೆ ಅಂಗಲಾಚಿ ಬೇಡಿಕೊಂಡಳು. ಆಗ ಆಕೆಯ

ಭಾವಾಭಿನಯ ಆದರಲ್ಲಿರುವ ಮೊದಲಿಕೆ, ಅವಳ ಗುಲಾಬಿ ಬಣ್ಣದ ಗಲ್ಲದ ಮೇಲಿದ್ದ ಕಿಡಿಗೇಡಿತನ ಇವೆಲ್ಲವನ್ನು ನಾನು ನೋಡದಿರಲಾಗ ಲಿಲ್ಲ. ನೋಡಿದೆನು, ಹೆದರಿಕೆಯೇಕೆ? ಸಬಲನಾದ ನಾನು ಅಬಲೆ ಆದ ರಲ್ಲೂ ನನ್ನ ಧರ್ಮ ಪತ್ನಿಯಾಗಿರುವ (ಆದೂ ಆರ್ಯ ಧರ್ಮ) ನಿನಗೆ ಇಲ್ಲಿಂದಲೇ ಇಷ್ಟು ದೂರದಿಂದಲೇ ಹೆದರಿಕೊಂಡರೆ, ನನಗೆ ನಮ್ಮ ಅಪ್ಪನು ಹೇಳಿಕೊಡುತ್ತಿದ್ದ ಗಂಡಸತನ ಎಲ್ಲಿ ಉಳಿದೀತು!

ಅರ್ಧ ಪತ್ರ ಓದಿ ಅಷ್ಟಕ್ಕೇ ಸಿಟ್ಟಾಗಬೇಡ. ಇನ್ನೂ ಇದರ ಉತ್ತರಾ ರ್ಧವಿದೆ.

ಮಲೆನಾಡ ಹುಡುಗಿಯ ಈ ಮರು ಪ್ರಶ್ನೆಗೆ ಉತ್ತರ ಕೊಡಲು ಮನಸ್ಸು ಬರಲಿಲ್ಲ. ಅಷ್ಟರೊಳಗಾಗಿ ಆಕೆಯ ತಾಯಿ ತಮ್ಮಂದಿರು ಯೋಗಕ್ಷೇಮದ ಸಮಾಚಾರವನ್ನು ಎತ್ತಿಕೊಂಡರು. ಆಕೆಗೆ ಇನ್ನೂ ಮಾತಾ ಡಬೇಕೆಂಬ ಆಶೆ ಇದ್ದಿತು. ಅವಕಾಶ ಸಿಕ್ಕಲೇ ಇಲ್ಲ. ನಾನು ಊರು ಬಿಡುವ ಹೊತ್ತಾಯಿತು. ಎದ್ದು ಹೊರಟೆನು. ಸದ್ದಿಲ್ಲದೆಯೇ ಈಕೆಯೂ ನನ್ನ ಜೊತೆಯಲ್ಲೇ ಬಂದಳು, ಗಾಬರಿಯಾಗಬೇಡ. ನಾನು ಹೋಗುವ ದಾರಿಯಲ್ಲಿರುವ ತನ್ನ ಶಾಲೆಗಾಗಿ. ಶಾಲೆಯ ದೂರವನ್ನು ಇಬ್ಬರೂ ಒಟ್ಟಿಗೇ ನಡೆದವು. ಮತ್ತೊಂದು ಬರುವಿರಿ ಎಂಬುದೊಂದೇ ನಾಲ್ಕು ಪರ್ಲಾಂಗಿನ ದಾರಿಗೆ ಕೇಳಿದ ಒಂದು ಪ್ರಶ್ನೆ. ಧ್ವಜದಂತೆ ತಲೆಎತ್ತಿ ನಲಿಯುತ್ತಿದ್ದ ಆ ಮುಖವು ಭೂಮಿಯತ್ತ ಬಗ್ಗಿದ್ದಿತು. ದೃಷ್ಟಿ ಕಾಲಿನ ಬೆರಳುಗಳ ಮೇಲೆ ಇದ್ದಿತು. ನಾನು, ಹೇಗೆ ಹೇಳಲಿ ಮತ್ತು ಮಲೆನಾಡಿನ ಸಂಚಾರಕ್ಕೆ ನಾನು ಬರಬೇಕಾದ ಅಗತ್ಯ ಬಂದಾಗ ಬರುವೆನು ಎಂದು ಹೇಳಿದೆನು. ಹೋಗಿ ಪತ್ರ ಬರೆಯಿರಿ ಎನ್ನುವ ಹೊತ್ತಿಗೆ ಶಾಲೆ ಸಿಕ್ಕಿತು. ಸಂಜೆ ಹಂಸಬಾವಿಗೆ ಬಂದು ಬಿಟ್ಟೆನು.

ಪೂರ್ಣಿಮಾ, ನಿಜವಾಗಿಯೂ ಹೇಳುವುದಾದರೆ, ಈ ಹುಡುಗಿಯು ಮನೆಯಲ್ಲಿ ಆಕೆ ಮಾಡಿದ ತಿಳಿ ಮೊದಲಿಕೆ ನನ್ನನ್ನು ಅಷ್ಟು ಭಾವಾಪನ್ನ ನಾಗಿ ಮಾಡಲಿಲ್ಲ. ದಾರಿಯಲ್ಲಿ ನನ್ನೊಡನೆ ನಡೆವಾಗ ಭೂಮಿಯಷ್ಟು ಭಾರವಾಗಿ ಆಕೆ ಇಡುತ್ತಿದ್ದ ಹೆಜ್ಜೆ, ಆಕೆಯ ಎದೆಯಲ್ಲಿ ಬಡಿಯುತ್ತಿರುವ

ಭಾವನೆಗಳ ಬಡಿತದ ಸದ್ದು ನನ್ನನ್ನು ವ್ಯಾಕುಲಕ್ಕೀಡುಮಾಡಿತು. ಈ ವ್ಯಾಕುಲದಲ್ಲಿ ಅನರ್ಥವೇನೂ ಇಲ್ಲ ಮಹಾರಾಯತೀ. ನನ್ನ ಈ ಪತ್ರದ ಮುಂದಿನ ಮಾತುಗಳನ್ನು ಸರಿಯಾಗಿ ಮನನ ಮಾಡಿಕೋ.

ಹುಬ್ಬಳ್ಳಿಯನ್ನು ತಲುಪಿನ ಮರುದಿನವೇ ನಿನಗೆ ಪತ್ರಬರೆದ ಕೂಡಲೇ ಅದೇ ಘಳಿಗೆಯಲ್ಲೇ ಈ ಹುಡುಗಿಗೂ ಒಂದು ಪತ್ರ ಬರೆದೆ. ಏನು ಬರೆದನೊ ಎಷ್ಟು ಬರೆದನೋ ಹೇಗೆ ಬರೆದನೊ ತಿಳಿಯದು. ನನಗೆ ನೆನ ಪಿರುವ ಮಟ್ಟಿಗೆ ಆಕೆಯ ಜೀವನದಲ್ಲಿ ಮೂಡಿರುವ ಒಂದು ವೇದನೆಯನ್ನು ಪರಿಹರಿಸಲು, ಆಕೆಯನ್ನು ಆಶಾವಾದಿಯನ್ನಾಗಿ ಮಾಡಲು, ಸರ್ವಸಾಮಾನ್ಯ ವಾದ ಸ್ತ್ರೀ ಜೀವನದ ಸಿದ್ಧಾಂತ ಮತ್ತು ಸಾಹಿತ್ಯವನ್ನು ಬಣ್ಣಿಸಿರಬ ಹುದು.

ನನ್ನ ಪತ್ರಕ್ಕೆ ಮೂರು ದಿನಗಳೊಳಗಾಗಿ ಈ ಹುಡುಗಿಯ ಉತ್ತರ ಬಂದೇಬಿಟ್ಟಿತು. ಆ ಉತ್ತರವನ್ನು ಓದಿದ ಮೇಲೆಯೇ ನಿನಗೆಲ್ಲವನ್ನು ನಿವೇದಿಸಿಬಿಡುವ ಪ್ರೇರಣೆಯಾಯಿತು.

ಆ ಪತ್ರ ದೊಡ್ಡದಾಗಿದೆ. ಅರ್ಧ ಇಂಗ್ಲಿಷ್ ಅರ್ಧ ಕನ್ನಡದಲ್ಲಿದೆ. ನಾನು ಆಕೆಯ ಕಣ್ಣುಗಳಲ್ಲಿ ಯಾವ ಬಕಾಸುರನ ಹಸಿವನ್ನು ಕಂಡಿದ್ದೇನೊ ಅದೇ ದಾಹ, ಅದೇ ಹಸಿವು, ಅದೇ ಆತುರ, ಈ ಪತ್ರದಲ್ಲಿ ತುಂಬಿಕೊಂಡಿದ್ದಿತು. ಭಾವನೆಗಳನ್ನು ಬಣ್ಣಿಸಿ ಬರೆಯಲು ಹೋಗಿ ಆಕೆ ಸಫಲಗಳಾದಿದ್ದರೂ ತನ್ನ ನೋವನ್ನು ನನಗೆ ಮುಟ್ಟಿಸುವುದರಲ್ಲಿ ಯಶಸ್ವಿಯಾಗಿರುವಳು. ಇದ ರಲ್ಲಿನ ಈ ಕೆಳಗಿನ ಮಾತುಗಳು ಮಾತ್ರ ನನ್ನ ಸಹಾನುಭೂತಿಯನ್ನೆಲ್ಲಾ ಕಸಿದುಕೊಂಡಿವೆ.

‘‘ಅಣ್ಣಾ, ನನಗೆ ಪತ್ರಬರೆಯುವರೆಲ್ಲರೂ, ಇಂತೀ ನಿನ್ನ ಅಣ್ಣ. ನಿನ್ನ ಒಡಹುಟ್ಟು, ನಿನ್ನ ಸಹೋದರ, ಎಂದು ಬರೆಯುವರೇ ಇರುವರು. ನೀವಂತೂ ನನ್ನ ಅಣ್ಣನಿಗೆ ಅಣ್ಣನಷ್ಟು ಹಿರಿಯರು. ಪೂರ್ಣಕ್ಕನ ಭಾಗ್ಯದದೇವರು. ನೀವು ಉಪದೇಶಮಾಡುವದೇನೋ ಸರಿ. ಆದರೆ ಎಲ್ಲರಿಗೂ ನಾನು ತಂಗಿಯೇ ಆಗಿರಬೇಕಾಗಿದೆ ಅಣ್ಣಾ. ಸಾಹಿತಿಗಳ ಸಾಹಿತ್ಯದ ಶಬ್ದಕೋಶದಲ್ಲಿ

ಎಲ್ಲ ಅರ್ಥಗಳಿಗೂ ಒಂದೇ ಶಬ್ದವೇ ಇರುವುದೇನಣ್ಣಾ ? ನನ್ನ ಜೀವನದ ಆಶೋತ್ತರಗಳಬಗ್ಗೆ ಅಕ್ಕನು ಏನೂ ಹೇಳಿಲ್ಲವೆ? ನಾನಷ್ಟು ಭಾವಜೀವಿ ಸಾಹಿತಿಯಲ್ಲದಿದ್ದರೂ ಸಾಹಿತಿಗಳ ಪೂಜಾರಿಣಿ. ಈ ಒಂದು ತಪ್ಪಿನಿಂದಲೇ ನಾನಿಂತು ಕೊರಗಿಗೀಡಾಗಬೇಕೇ? ನಿಮ್ಮ ಪತ್ರ ನನಗೆ ಬಾಳಿನಲ್ಲಿ ಬೆಳಕಿನ ಆಶೆಯನ್ನು ಕೊಡುತ್ತಿದೆ. ಆದರೆ ( I can't be happy ) ನನಗೆ ಸುಖವಿಲ್ಲ; ಸುಖ ಸಿಕ್ಕುವುದಿಲ್ಲ. ನಾನು ಪಾಪಮಾಡದಿದ್ದರೂ ಪಾಪದ ಪ್ರೇರಣೆಯಿಂದ ಅಪರಿಶುದ್ಧಳಾಗಿರುವೆನು. ಅಕ್ಕನ ಜೊತೆಯಲ್ಲಿ ಓದುತ್ತಿದ್ದಾಗ, ಅಕ್ಕ ನಿಮ್ಮನ್ನು ಹಾಡಿ, ನೀವಲ್ಲಿ ಇಲ್ಲದಿದ್ದರೂ ನಿಮ್ಮೊಂದಿಗೆ ಕೂಡಿ ಇರುತ್ತಿದ್ದ ಭಾವನಾಜೀವನದ ಚಿತ್ರವನ್ನು ನೋಡಿನೋಡಿ ನಾನು ಜಗತ್ತಿನತ್ತ ಆಶೆಯಿಂದ ನೋಡುತ್ತಿದ್ದೆನು. ನಿಮ್ಮನ್ನು ಅಕ್ಕನಜೊತೆಯಲ್ಲಿ ನೋಡಬೇಕೆಂಬ ಆಶೆಯಿಂದಲೇ ನಾನು ಹುಬ್ಬಳ್ಳಿಗೆ ಬಂದೆನು. ನಾನು ನನ್ನ ಕಣ್ಣುಗಳನ್ನು ಮುಚ್ಚುವುದಾಗಲಿಲ್ಲ. ನೋಡಿದೆನು; ನಿಮ್ಮಿಬ್ಬರ ಜೀವನದ ಲೀಲಾ ವಿನೋದವನ್ನು ಕಂಡು ಸಂತೋಷಪಟ್ಟೆನು. ಈ ಸಂತೋಷದ ಜೊತೆಗೆ ಅಣ್ಣಾ, ಸ್ವಲ್ಪ ಕರುಬಿದೆನು. ಸುಳ್ಳೇಕೆ ಹೇಳಲಿ, ಅದು ಸ್ತ್ರೀಗೆ ಸಹಜವಾದುದು.

ಒಂದು ಮಾತಿನಲ್ಲಿ ನಾನು ನಿಮಗೆ ನನ್ನ ಜೀವನದ ರಹಸ್ಯವನ್ನು ಹೇಳಿಬಿಡಲೇ? ನಿಮ್ಮ ಮಗಳು ಲೀಲಳಿಗೆ ೧೨ ವರುಷವಾಗಿದ್ದರೆ, ನನಗೆ ಇನ್ನು ಹತ್ತುವರುಷಗಳಷ್ಟೇ ಹೆಚ್ಚಾಗಿದೆ. ಆದ್ದರಿಂದ ನಿಮ್ಮಲ್ಲಿ ನಿಮ್ಮಂತಹ ಹೆಣ್ಣುಗರುಳಿನವರಲ್ಲಿ ಮುಚ್ಚಿಕೊಳ್ಳುವುದೇನಿದೆ? ನಾನು ಈ ವಯಸ್ಸಿಗೇ ಸನ್ನಿವೇಶಗಳ ಸುಳಿಗೆ ಸಿಕ್ಕಿ ಹೋಗಿರುವೆನು. ಕಾಮ ಪ್ರೇಮಗಳ ವ್ಯಾಖ್ಯೆಯನ್ನು ಪುಸ್ತಕದಲ್ಲಿ ಓದಿರುವೆನು. ಜನರ ಬಾಯಲ್ಲಿ ಕೇಳಿರುವೆನು. ಆದರೆ ನನ್ನನ್ನು ವಿವಾಹವಾಗುವೆನೆಂದು ಬರುವವರ ಬಳಿಯಲ್ಲಿರುವುದು ಕಾಮವೋ ಪ್ರೇಮವೋ ಗೊತ್ತಾಗುತ್ತಿಲ್ಲ. ನಾನು ಆಶೆಯ ಮಹಲಿನ ಮೇಲೇರಿ ಕುಳಿತು ಅಲ್ಲಿ ಬಿಸುವ ಗಾಳಿ ಬೀಸಲು ಎಲ್ಲವನ್ನೂ ತಿನ್ನುತ್ತ ಕುಳಿತಿರುವೆನು. ನನಗೆ ವಿವಾಹವಾಗಬೇಕೆಂಬ ಆತುರವಿದೆ. (ನನ್ನ ನಾಚಿಕೆಗೇಡಿತನಕ್ಕೆ ಕ್ಷಮಿಸಿರಿ) ನನ್ನ ತಂದೆ ತಾಯಿಂದಿರಿಗಾದರೂ ಈ ಬೆಳೆದ ಹೆಣ್ಣು ತಲೆಯಶೂಲೆಯಾಗಿದೆ. ನಮ್ಮಲ್ಲಿ ವರದಕ್ಷಿಣೆಯ ಕಾಟವಿಲ್ಲ. ನಾವೂ ಕನ್ಯಾಶುಲ್ಕವನ್ನು ಕೇಳುವುದಿಲ್ಲ. ಆದರೂ ನಾನು ಓದಿರುವ ತಪ್ಪಿಗಾಗಿ ನನ್ನ ಮನಸ್ಸಿಗೊಪ್ಪುವವರನ್ನು ಆರಿಸಿಕೊಳ್ಳುವ ಒಂದು ಸ್ವಾತಂತ್ರ್ಯ ಸಿಕ್ಕಿದೆ. ಅದೇ ನನ್ನ ಇಂದಿನ ಪರಿಸ್ಥಿತಿಗೆ ಮೂಲ ಕಾರಣ. ನನಗೆ ಕೆಲವು ವರಗಳು ಬೇಡವಾಗಿದ್ದರೆ ನಾನೊಪ್ಪಿದ ಕೆಲವರಿಗೆ ನನ್ನ ಓದು ನನ್ನೀಆಧುನಿಕತೆ ಬೇಡ

ಹಾಗಿದೆ. ಕೊನೆಗೊಮ್ಮೆ ನನಗನ್ನಿಸಿದೆ ನಾನು ಮದುವೆಯಾಗದೆ ಹೀಗೆಯೇ ಇದ್ದು ಬಿಡಲೇ? ಏನಕ್ಕಾ, ಇದು ಸಾಧ್ಯವೆ ತಿಳಿಸು."

ಆಕೆಯ ಪತ್ರ ಮುಗಿಯಿತು.

ಪೂರ್ಣೀ, ಏನಿದು ನಿನ್ನ ಗೆಳತಿಯ ಸಮಸ್ಯೆ? ನನಗೆ ಸಹಾನುಭೂತಿ, ಅನುತಾಪವಿದೆ. ಈ ಹೆಣ್ಣಿನ ಹೃದಯವು ಕೊರಗುತಿವೆ ಎಂದು ಮರುಗುವೆನು. ಆದರೂ ಆಕೆ ಕೇಳುವ ಪ್ರಶ್ನೆ ತಾನು ಎಂದಿಗೂ ಯಾವತ್ತಿಗೂ ಅವಿವಾಹಿತೆಯಾಗಿರಲು ಸಾಧ್ಯವೆ? ಈ ಪ್ರಶ್ನೆಗೆ ನನಗೆ ಉತ್ತರಕೊಡಲು ನೀನೇ ಬಲು ತಕ್ಕವಳು. ಆದ್ದರಿಂದಲೇ ಎಲ್ಲವನ್ನೂ ನಿನ್ನ ಮುಂದೆ ಹೇಳಿಬಿಟ್ಟೆನು. ಪಾಪ, ಆಕೆಯ ಮೇಲಿನ ಅಂದಿನ ಸಿಟ್ಟನ್ನು ಬಿಡು. ಏನಾದರೂ ಉತ್ತರ ಬರೆ. ಸ್ತ್ರೀ ಯಾವಾಗಲೂ ಅವಿವಾಹಿತೆಯಾಗಿರುವುದು ಸಾಧ್ಯವೇ ಪೂರ್ಣಿ? ಯೋಚಿಸು. ಒಂದು ಸಾಂತ್ವನಪರ ಪತ್ರವನ್ನು ಬರೆ. ಅಥವಾ ಏನು ಬರೆಯಬೇಕೆಂಬುದನ್ನು ನನಗೆ ತಿಳಿಸು.

ಈಕೆ ಹೇಳುವುದೆಲ್ಲವೂ ನಿಜವಾದರೆ ಪ್ರೇಮವು ಕುರುಡೇನು? ಯೋಚಿಸು. ಆದರೆ ಪ್ರೀತಿಸುವುದು ಪ್ರಕೃತಿಯ ಸಹಜಧರ್ಮ. ಪ್ರೀತಿಯ ರೀತಿ ರೂಪಗಳು ಬೇರಿದ್ದರೂ ಪ್ರತಿಯೊಬ್ಬರೂ ಏನನ್ನಾದರೂ ಪ್ರೀತಿಸಲೇ ಬೇಕಲ್ಲವೆ? ಈ ಹುಡುಗಿ ಬಯಸುವುದು ತಾನೊಬ್ಬರನ್ನು ಪ್ರೀತಿಸುವದನ್ನು, ತನ್ನನ್ನು ಇನ್ನೊಬ್ಬರು ಪ್ರೀತಿಸುವದನ್ನು. ಪಾಲುಗಾರನನ್ನು ಕಾಣದಿದ್ದರೂ ಒಟ್ಟಿನಲ್ಲಿ ಈಕೆ ದಾಂಪತ್ಯ ಜೀವನವನ್ನು ಪ್ರೀತಿಸುತ್ತಿರುವಳು ಅಂದ ಮೇಲೆ ಇಂದಾಗಲೀ ನಾಳೆಯಾಗಲೀ ಈಕೆ ಮದುವೆಯಾಗಲೇ ಬೇಕಲ್ಲವೆ? ಬೇಡ, ಇದು ಪುರುಷ ಜಾತಿಯ ಪ್ರಶ್ನೆಯಲ್ಲ ಸ್ತ್ರೀ ಜಾತಿಯ ಸಮಸ್ಯೆ. ನೀನೆ ಉತ್ತರಿಸು. ನೋಡಬೇಕು, ಆ ಉತ್ತರದ ಪ್ರತಿಯೊಂದನ್ನು ನನಗೂ ಕಳುಹಿಸು. ನೀನೆಂತು ನಿನ್ನ ಬುರುಡೆಯನ್ನು ಉಪಯೋಗಿಸಿರುವಿ ಎಂಬುದನ್ನು ನಾನೂ ತಿಳಿದುಕೊಳ್ಳುವೆನು. ಈಗ ಕಲಿತ ಹುಡುಗಿಯರ ಭವಿಷ್ಯದ ಮುಂದಿರುವ ನಾಜೂಕಾದ ಪ್ರಶ್ನೆ ಇದು.

ಇನ್ನೇನು, ಈಗಲಾದರೂ ನಿನ್ನ ಮಲೆನಾಡ ಹುಡುಗಿಯ ಬಗ್ಗೆ, ಅಲ್ಲ ನನ್ನ ವಿಚಾರದಲ್ಲಿ, ಅನ್ಯಥಾ ತಿಳಿದುಕೊಳ್ಳುವುದಿಲ್ಲವಲ್ಲ? ಪಾಪ ಆಕೆಯ ಮದುವೆಯ ಪೌರೋಹಿತ್ಯವನ್ನು ವಹಿಸಿ ಪುಣ್ಯ ಕಟ್ಟಿಕೋ.

ಲೀಲಾ, ಶಂಕರ, ರಾಘವರ ಬಗ್ಗೆ ಒಂದಿಷ್ಟು ಸಾಹಿತ್ಯವನ್ನು ನಿನ್ನ ಪತ್ರದ ಒಕ್ಕಣಿಕೆಯಲ್ಲಿ ಸೇರಿಸು. ನೀನೊಬ್ಬಳೇ ಏನು ಅವರಿಗೆ ಹೊಣೆ? ಹಣ ಕಳುಹಿಸುವುದಷ್ಟೇ ನನ್ನ ಕೆಲಸವೇನು?

ಇತಿ ನಿನ್ನ ಎದೆಯನ್ನ.

x x x

## [೧೩]

**ಶ್ರೀಮತಿಯವರೇ,**

ತಮ್ಮ ಪತ್ರವನ್ನು ಎದುರುನೋಡಿದೆ. ಟಪ್ಪಾಲು ಬಂದಿತು. ತಮ್ಮ ಪತ್ರಗಳು ಬರುವ ದಿನಗಳು ನನಗಿಂತ ನಮ್ಮ ಕಚೇರಿಯ ಸಿಪಾಯಿಗೇ ಚೆನ್ನಾಗಿ ತಿಳಿದಿದೆ. ಇಂದು ಅವನಿಗೂ ನಿರಾಶೆಯಾಯಿತು. ನಿನ್ನ ಪತ್ರ ಬಂದಾಗ ಅದನ್ನು ಜೋಪಾನವಾಗಿ ತಂದುಕೊಟ್ಟಾಗ ನಾನು ಅದನ್ನು ಆತುರದಿಂದ ತೆಗೆದುಕೊಂಡ ಕೂಡಲೇ ಓದಿ ನೋಡಿದರೆ ಆ ಸಿಪಾಯಿಗೇ ಎಷ್ಟೋ ಕೃತಕೃತ್ಯತೆಯ ಸಮಾಧಾನ? ನಿನ್ನ ಪತ್ರ ಬರಬೇಕಾದ ದಿನಗಳಲ್ಲಿ ಬರದಿದ್ದರೆ ಅಂದು ಆ ಹುಡುಗ ನನ್ನೆದುರಿಗೇ ಬರಲು ಹಿಂಜರಿಯುವನು. ಪಾಪ, ಅವನಿಗೆಂತಹ ಹಿಂಸೆ? ಆದ್ದರಿಂದ ನೀನು ಪತ್ರ ಬರೆಯುವುದನ್ನು ಬಿಟ್ಟರೆ ಇಬ್ಬರಿಗೆ ಹಿಂಸೆ ಕೊಟ್ಟಂತಾಗುವುದು.

ಇಂದು ಸ್ವಲ್ಪ ಬೇಸರದಿಂದಲೇ ಕಚೇರಿಯಿಂದ ಹೊರಬಿದ್ದೆನು. ನಿನ್ನ ಮೇಲೆ ಸ್ವಲ್ಪ ಕೋಪವೂ ಬಂದಿತ್ತು. ನೀನು ಮಕ್ಕಳ ತಾಯಾದಂತೆಲ್ಲಾ ನಿನಗೆ ಸ್ವಲ್ಪ ಜಂಭ ಜಾಸ್ತಿಯಾಯಿತಲ್ಲವೆ? ನಾನು ಸಹ ಎರಡು ತಿಂಗಳು

ಒಂದೂ ಪತ್ರವನ್ನು ಬರೆಯಬಾರದು ಆಗ ಬುದ್ಧಿಬರುತ್ತೆ. ಎಂದು ಗೊಣಗಿಕೊಂಡೆ. ಕಾಫಿಗಾಗಿ ಕಚೇರಿಯ ಪಕ್ಕದಲ್ಲೇ ಇದ್ದ 'ನ್ಯೂ ಗಣೇಶ ವಿಲಾಸ' ಹೊಟೇಲಿಗೆ: ಹೋದೆನು. ಅದು ನೀನು ಅನ್ನುವಂತೆ ನನ್ನ ಮಾವನ ಮನೆಯೇ ಸರಿ. ಅತ್ತೆಯಿಲ್ಲದ, ಮಗಳಿಲ್ಲದ ಮಾವನ ಮನೆ ಅಷ್ಟೆ? ಉಡುಪಿಯ ಆಚಾರ್ಯರಿಗೂ ನನಗೂ ಬಹಳ ಸ್ನೇಹ. ಹಣೆ ಬಹಳ ಅಗಲವಾಗಿದ್ದವರಿಗೆ ಬುದ್ಧಿ ಬಹಳವೆಂದು ಪ್ರತೀತಿ. ನಮ್ಮ ಈ ಹೋಟೇಲಿನ ಆಚಾರ್ಯರ ಹಣೆ ಅದೆಷ್ಟು ಅಗಲ; ತನ್ನಲ್ಲಿಗೆ ಹೋಗಿಬರುವ ಜನರನ್ನೆಲ್ಲಾ ನೋಡುತ್ತಲೇ ಇವರು ರಾಜಕಾರಣಿಗಳಾಗಿದ್ದಾರೆ. ಯಾರ ವಿಷಯವಾಗಲಿ ಯಾವ ವಿಷಯವಾಗಲಿ ಇವರು ಹುಬ್ಬಳ್ಳಿಯ ಬಹು ಹಳಬರಂತೆ ಮಾತನಾಡುವರು. ಈ ಆಚಾರ್ಯರೂ ಈ ಊರಿಗೆ ಎಳೆಗರುವಾಗಿ ಬಂದು ಈಗ ಎತ್ತಾಗಿರುವರು. ಇವರು ನನ್ನೊಂದಿಗೆ ಮಾತನಾಡದ ವಿಷಯವೇ ಇಲ್ಲ. ನಾನು ಈ ಊರಿಗೆ ಬಂದು ಐದು ವರುಷಗಳು ಸಮೀಪಿಸುತ್ತಿದ್ದರೂ, ಇವರಷ್ಟು ಪರಿಚಿತರು ನನಗಾರು ಇಲ್ಲ. ನಾನು ಸ್ವಲ್ಪ ನಗುತ್ತಿದ್ದರೆ, ಮುಖದಲ್ಲಿ ನೀನು ಬರೆದ ಮಾತುಗಳು ಮೂಡಿದ್ದರೆ, ಇವರು ಕೂಡಲೇ "ಊರಿನಿಂದ ಪತ್ರ ಬಂದಿತೇನು ಎಷ್ಟು ಪುಟದ್ದು?" ಎಂದು ಕೇಳಿಯೇ ಬಿಡುವರು. ಮುಖ ಸಪ್ಪೆಗಿದ್ದರೆ ಏಕೆ ಪತ್ರ ಬರಲಿಲ್ಲವೇ ಎಂದು ಕೇಳಿಬಿಡುವರು. ನೋಡಿದೆಯಾ ನಿನ್ನ ಪತ್ರ ಬರದಿದ್ದರೆ ನನ್ನ ಪಾಡು ? ಪತ್ರ ಬರೆಯುವುದಕ್ಕೆ ರಾಘು ಕೈಬಿಡುವುದಿಲ್ಲವೆಂಬುದು ನಿನ್ನದೊಂದು ಸುಳ್ಳು ನೆಪ. ಅವನು ರಾತ್ರಿ ಮಲಗಿದ ಮೇಲೆ ಎದ್ದುಕುಳಿತು ಬರೆದರೆ ಏನು ? ನೀನು ಮೊದಲೇ 'ಸಿದ್ದೆಯ ಮುದ್ದೆ;' ಜ್ಞಾಪಕವಿದೆಯೇ ? ಹಾಲಿನವಳು ಬೆಳಗಿನಾರು ಗಂಟೆಗೆ ಬೆಳಕುಹರಿಸಿ ಬಾಗಿಲು ತಟ್ಟಿ, ಅವ್ವಾವರೇ ಎಂದು ಕೂಗಿದರೆ, ಅವಳನ್ನು ತುಟಿಯೊಳಗೇ ಶಪಿಸುತ್ತ ಅತ್ತಲಿತ್ತ ಹೊರಳಾಡುವುದೂ, ನಿನ್ನ ಪಾಡನ್ನು ನೋಡಲಾರದೆ ನಾನೇ ಎದ್ದು ಹಾಲು ತೆಗೆದು ಇಡುತ್ತಿದ್ದುದು? ಆಗ ಹಾಲಿನವಳು ಒಳಗೊಳಗೇ ನಗುತ್ತ "ಏನ್ ಬುದ್ದೀ ಅವ್ವಾವ್ರಗೆ ಮೈಗೆ ಚೆನ್ನಾಗಿಲ್ವ?" ಎಂದು ಕೇಳುತ್ತಿದ್ದಳು. ನಾನು ಊ, ಮತ್ತು ಉಹು, ಎರಡನ್ನು ಇಲ್ಲ ಹೌದು ಎಂಬ ಎರಡರ್ಥ ಸೇರಿಸಿ ಉತ್ತರ ಕೊಟ್ಟು ಹಾಲನ್ನು ತಂದು ನಿನ್ನ ಹಾಸಿಗೆಯ ಹತ್ತಿರ ಇಟ್ಟು ಗಂಟೆ

ಎಂಟಾಯಿತು ಎಂದು ಮಂತ್ರ ಜಪಿಸಲಾರಂಭಿಸಿದಾಗ ''ನಿಮ್ಗೇನು ಗಂಡಸರಿಗೆ ಸ್ವಲ್ಪವೂ ದಯೇನೇ ಇಲ್ಲ. ಉಪಕಾರ ಸ್ಮರಣೆ ಇಲ್ಲದೋರು ನೀವು" ಎಂದು, ಹೊರಳಾಡಿ, ಕೂಗಾಡಿ ಮೇಲಕ್ಕೇಳುವ ಹೊತ್ತಿಗೆ ಎಳೆ ಬಿಸಿಲು, ಕಿಟಕಿಯ ಕಿಂಡಿಯಿಂದ ಒಳಕ್ಕೆ ನುಗ್ಗಿ ನಿನ್ನ ಅರ್ಧ ಮೂಗು ಮುಚ್ಚಿಕೊಂಡ ಮುಖದ ಮೇಲೆ ಬಿದ್ದಾಗ, ನಾಚಿಕೆ ಬಂದು ದಡಾರನೆ ಎದ್ದು, ''ನಿಮ್ಮ ಮುಖ ಯಾವಾಗಲೂ ರಾಹು ನಿಮ್ಮ ಮುಖ ತೋರಿಸ ಬೇಡಿ, ಬೆಳ್ಗೆ ಎದ್ದು ನಿಮ್ಮ ಮುಖ ನೋಡಿದರೆ ರಕ್ತ ಕಾಣೋವೇ, ಅಂತ ಹೇಳುತ್ತಲೇ ನಿದ್ದೆಯ ಕೋರೆಯಿಂದ ಕೂಡಿದ ನನ್ನ ಜೊಲ್ಲಿನ ಮುಖವನ್ನೇ ಬೆಳಗಿನ ಉಪಹಾರವನ್ನು ತಿನ್ನುವಂತೆ ತಿಂದು ಹೋಗುತ್ತಿದ್ದ ಆ ದಿನಗಳಲ್ಲಿ ನಿನಗಿನ್ನೂ ಮಕ್ಕಳ ಕಾಟವಿರಲಿಲ್ಲ. ಅತ್ತೆಯಂತೂ ಪರಲೋಕವಾಸಿ ಯಾಗಿ ಅಪ್ಪ ಸನ್ಯಾಸಿಯಾಗಿದ್ದರು. ನೀನೇ ಮನೆಗೆ ನನಗೆ ಒಡತಿ. ಆದ್ದ ರಿಂದಲೇ ನಿನಗಷ್ಟು ನಿದ್ದೆ. ಚಿಂತೆಯ ಸಂತೆಗಿನ್ನೂ ನೀನು ಹೋಗಿರಲಿಲ್ಲ. ಈಗದರ ಸಂತೆ ಸಾಕಷ್ಟಾಗಿದೆ. ಆದರೆ ನಿದ್ದೆ ಬರದೆ ಒದ್ದಾಡುವ ಬದಲು ಎದ್ದು ಕುಳಿತು ನನಗೆ ಪತ್ರ ಬರೆಯುವುದೇ ಒಳ್ಳೆಯ ಕೆಲಸವಲ್ಲವೆ? ಇನ್ನಾ ದರೂ ಬರೆ.

ನಿನ್ನ ಜಂಭ, ನಿನ್ನ ನಿದ್ದೆ ಇವನ್ನು ಬಣ್ಣಿಸುವುದರಲ್ಲಿ ನಾನು ಬರೆ ಯಬೇಕಾದ್ದನ್ನೇ ಮರೆತುಬಿಟ್ಟೆನು. ಬೆಳಗಿನ ಕಾಫಿ ತೀರಿಸಿಕೊಂಡು ಈಚೆಗೆ ಬಂದು ಎಳೆಬಿಸಿಲ ಕಡೆಗೆ ತಲೆಎತ್ತಿ ನೋಡುತ್ತಿರುವಾಗಲೇ ದಾರಿಯ ಪಕ್ಕದಲ್ಲಿ ಒಬ್ಬ ಸೈಕಲ್‌ವಾಲಿ (ಹೆಂಗಸಲ್ಲ) ನಿಂತಿದ್ದನು. ಅವನ ಸೈಕಲನ್ನು ಸಾಲ ಕೇಳುವವರು ಹಿಡಿದು ನಿಲ್ಲಿಸುವಂತೆ ನಿಲ್ಲಿಸಿರುವ ಇಬ್ಬರು ಹುಡುಗಿಯರು ಹಿಡಿದಿದ್ದರು. ಆತ ಸೈಕಲನ್ನು ಬಿಡಲಾರ. ಹುಡುಗಿಯ ರನ್ನುಮಾತನಾಡಿಸುವುದನ್ನೂ ಬಿಡಲಾರ. ನನ್ನ ಕಣ್ಣೂ ಹಾಗೆಯೇ ಅತ್ತಲೇ ಹರಿಯಿತು. ಕಾಲುಗಳು ಇದ್ದ ಭಾಗದಲ್ಲೇ ಇದ್ದವು. ಆ ಹುಡುಗಿಯರು ವೇಷಭೂಷಣದಿಂದ ಅವರು ಹುಬ್ಬಳ್ಳಿಯವರಲ್ಲವೆಂದು ತಿಳಿದುಕೊಳ್ಳುವುದು ತಡವಾಗಲಿಲ್ಲ. ಆದರೆ ಅವರೇಕೆ ಇಂದು ನಡುಬೀದಿ ಯಲ್ಲಿ ನಸುಬೆಳಕಿನಲ್ಲಿ ಈ ಸೈಕಲ್‌ವಾಲಿಯನ್ನು ಹಿಡಿದು ನಿಲ್ಲಿಸಿರುವರು

ಎಂಬುದು ಹೊಳೆಯಲಿಲ್ಲ. ನಾನು ನಿಂತು ನೋಡಲಾರಂಭಿಸಿದೆ. ಸೈಕಲ್ ಹಿಡಿದು ಅದರೊಂದಿಗೆ ಆಟವಾಡುವ ನೆವದಲ್ಲಿ ಪೆಡಲನ್ನು ಹೆತ್ತಿ ತುಳಿಯುವುದರಲ್ಲಿ ಅವರು ಮಾಡುತ್ತಿರುವ ಅಂಗವಿನ್ಯಾಸ ಬಹಳವಾಯಿತು. ಅಸಹ್ಯವಾಗುವಷ್ಟಾಯಿತು. ನಕ್ಕರು. ಕೇಕೆಹಾಕಿದರು. ಇನ್ನು ಸೈಕಲ್‌ವಾಲಿಯನ್ನು ಹಿಡಿದು ಎಳೆಯಬೇಕು. ಅದೊಂದೇ ಉಳಿದಿತ್ತು. ನಾನು ನೋಟ ಕಡಿಮೆ ಮಾಡಿ ಕಿವಿಯನ್ನು ಅತ್ತಕೊಟ್ಟೆನು. ಮಾತುಗಳು ಹಿಂದಿಯಲ್ಲಿದ್ದರೂ ಏನೋ ವಿಚಿತ್ರವಾಗಿದ್ದವು. ಕೊನೆಗೆ ಅವರಿಬ್ಬರೂ ಆತನನ್ನು ಪೀಡಿಸುತ್ತಿದ್ದುದು 'ಚಾರ ಆಣೆ'ಗೆಂದು ಅವರ ಮಾತುಗಳ ಮೇಲಿನಿಂದ ತಿಳಿಯಲಾರಂಭಿಸಿತು.

ಇವರೇನು ಭಿಕ್ಷುಕಿಯರೆ? ವೇಷ ಅಂತಿಲ್ಲ. ಮತ್ತೆ ಸಂಭಾವಿತ ಬಡ ಸ್ತ್ರೀಯರೇ? ಅಲ್ಲ. ಅವರೇಕೆ ಈ ನಡುಬೀದಿಯಲ್ಲಿ ಈ ರೀತಿ ಸರ್ಕಸಮಾಡಿ ಹಣ ಕೇಳುತ್ತಿರುವರು ? ನಾನು ತಲೆ ಕೆರೆದುಕೊಂಡೆ. ಕೊನೆಗೆ ಅರ್ಥವಾಯಿತು ಆ ಹುಡುಗಿಯರಾರೆಂಬುದು. ಅರ್ಥವಾದ ಮೇಲೆ ಅವರ ಚಾರಾಣೆಯ ಆಟಕ್ಕೆ ನನಗೆ ಸಿಟ್ಟುಬರಲಿಲ್ಲ. ಹೊಟ್ಟೆಯುರಿ ಬಂದಿತು. ಎಲ್ಲೋ ಹುದುಗಿದ್ದ ಸಂಕಟವು ಉಕ್ಕಿಬಂದಿತು.

ಗಾಂಧೀಜಿ ಒಮ್ಮೆ ಅಂದಮಾತು ತಟ್ಟನೆ ನೆನಪಿಗೆ ಬಂದಿತು. "ಸೀತಾ ಸಾವಿತ್ರಿಯರ ನಾಡಿದು. ಇಂತಹ ನಾಡಿನಲ್ಲಿ ಭಾರತದ ಸ್ತ್ರೀಗೆ ಆಗುತ್ತಿರುವ ಅಪಮಾನ ಅಪಚಾರವನ್ನು ನನ್ನಿಂದ ನೋಡಲಾಗದು" ಎಂದು ಅವರು ಪಂಜಾಬಿನ ದುರಂತವನ್ನು ನೋಡಿ ಅಂದಿದ್ದರು. ಸರಿ, ಸಾಲು ಸಾಲಾಗಿ ಭಾರತ ವಿಭಜನೆಯ ಚಿತ್ರವೇ ಇತಿಹಾಸವಾಗಿ ನನ್ನ ಕಣ್ಣು ಮುಂದೆ ಹಾಯ್ದಿತು.

ಅಯ್ಯೋ ಪಾಪ ! ಇಂತಹ ಗತಿಯೇ ಎಂಬ ಉದ್ಗಾರ ನನ್ನ ಕರುಳಿನಲ್ಲಿ ಕೊರೆಯುತ್ತಿತ್ತು. ಪೂರ್ಣೀ, ನಿನಗನ್ನಿಸಿರಬಹುದು ನನ್ನ ಈ ಉದ್ಗಾರ ಈ ಸಂಕಟ, ವಿಚಿತ್ರವೆಂದು. ದಾರಿಯಲ್ಲಿ ಹೋಗಿಬರುವವರಿಗೆಲ್ಲಾ ಮರುಗುತ್ತಿರಿ ಎಂದು ನೀನು ಎಂದಿನಂತೆ ಚೇಷ್ಟೆಯಾಡಬಹುದು.

ಆದರೆ ಪೂರ್ಣಿ ನಾನು ಚೇಷ್ಟೆಯಾಡುವಂತಿಲ್ಲ. ಈ ಹುಡುಗಿಯರು ಮಾಡುತ್ತಿರುವ ಚೇಷ್ಟೆಯನ್ನೂ ಸಹಿಸಬೇಕಾಗಿದೆ.

ನಾಲ್ಕಾಣೆಯ ತಿರುಪೆಯ ಮಾತಿರಲಿ. ಇವರಾರು ಇಲ್ಲಿಗೇಕೆ ಬಂದರು, ಎಲ್ಲಿಯವರು ಎಂಬುದನ್ನು ವಿಚಾರಿಸುವ ಮೊದಲೇ ಇವರು ನಿರಾಶ್ರಿತೆಯರು ಎಂದು ನನಗನ್ನಿಸಿತ್ತು. ಹಿಂದೊಮ್ಮೆ ನನ್ನ ಆಫೀಸ್ ರೂಮಿನೊಳಕ್ಕೆ ಬಂದು ಕುರ್ಚಿಯ ಮೇಲೆ ಕುಳ್ಳಿರದೆ, ಮೇಜಿನ ಮೇಲೆ ಕುಳಿತುಕೊಳ್ಳಲೂ ಸಿದ್ಧವಾಗಿದ್ದ ಅಸ್ಸಾಮದ ನಿರಾಶ್ರಿತೆಯರಿಬ್ಬರ ನೆನಪು ಬಂದಿತು.

ಸ್ತ್ರೀಯ ಅತ್ಯಂತ ಪವಿತ್ರ ಧನವಾದ ಲಜ್ಜೆಯನ್ನು ತುಳಿದು ನಿಂತ ಈ ಸ್ತ್ರೀಯರನ್ನು ಕಂಡರೆ ಒಮ್ಮೊಮ್ಮೆ ಹೇಸಿಕೆಯಾಗುವುದು. ನಾವು ಸ್ತ್ರೀಯರನ್ನು ಪೂಜಿಸುವುದು ಗೌರವಿಸುವುದು ಅವರ ಶೀಲಕ್ಕಾಗಿ. ನಾನು ಅಕುಲೀನ ಸ್ತ್ರೀಯ ದರ್ಶನವಾದರೆ ಸ್ತ್ರೀಯರಲ್ಲಿ ನನಗೆ ಇರುವ ಅಪಾರ ಗೌರವಕ್ಕೆ ಎಲ್ಲಿ ಕುಂದು ಬಂದುಬಿಡುವುದೋ ಎಂಬ ಹೆದರಿಕೆಯಿಂದ, ನಾನು ಅಂತಹ ಸನ್ನಿವೇಶವನ್ನೇ ಕಣ್ಣುಗಳಿಗೆ ತಂದುಕೊಳ್ಳುವುದಿಲ್ಲ. ಸುಸಂಸ್ಕೃತೆಯಾದ ಸ್ತ್ರೀ, ದೇವರ ಹಣೆಯ ಮೇಲಿನ ತಿಲಕವಿದ್ದಂತೆ. ಆದರೂ ಈ ನಿರಾಶ್ರಿತ ಸ್ತ್ರೀಯರ ಪರಿಸ್ಥಿತಿಯನ್ನು ನೋಡಿದಾಗ ನನಗೆ ಅವರ ಬಗ್ಗೆ ತಿರಸ್ಕಾರ ಬರದೆ ಕರಳು ಕೀಳುವ ವೇದನೆಯಾಗುವುದು.

ಭಾರತದ ಸ್ವಾತಂತ್ರ್ಯವು ನಮಗಿತ್ತ ಶಾಪವಿದೇನೋ ಎಂದನ್ನಿಸುವುದು, ಆ ಹಿಂದು ಮುಸ್ಲಿಂ ದೊಂಬಿಯ ಕಾಲದಲ್ಲಿ ಬರುತ್ತಿದ್ದ ಸುದ್ದಿಗಳನು. ಓದುವದಿರಲಿ ಅದನ್ನು ಭಾಷಾಂತರಿಸಿ ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಬೇಕಾಗಿ ಬಂದಾಗಲೇ ನನ್ನ ಹೃದಯವು ಕಮರಿ ಹೋಗುತ್ತಿತ್ತು. ಸೇಡಿಗೆ ಸೇಡು ತೀರಿಸಿಕೊಳ್ಳುವಾಗ ಸ್ತ್ರೀಯರ ಮಾನದ ಚಲ್ಲಾಟವಾಡಿದಾಗ ಸ್ವತಂತ್ರದೇವಿ ರಕ್ತರಂಜಿತ ವಸ್ತ್ರವನ್ನುಟ್ಟು ಬಂದಂತೆ ಕಾಣುತ್ತಿತ್ತು. ಅಪಹೃತ ಸ್ತ್ರೀಯರ ಸಂಖ್ಯೆಯನ್ನು ಧಾರಾಳವಾಗಿ ಬರೆಯುತ್ತಿದ್ದ ಕೈ ಓದುತ್ತಿದ್ದ ಬಾಯಿ ಇವೆಲ್ಲವೂ ಈ ನಿರಾಶ್ರಿತ ಹುಡುಗಿಯರನ್ನು ನೋಡಿದಾಗ ನೆನಪು ಬಂದಿತು.

ಜಾತೀಯತೆ ವಿಷವು ಅದೆಷ್ಟು ಕ್ರೂರವೆಂಬುದನ್ನು ಮನಗೊಂಡ ಪಂ. ನೆಹರು, ತನ್ನ ಪ್ರತಿಭಾಷಣದಲ್ಲೂ ಪ್ರತಿಮಾತಿನಲ್ಲೂ ಈ ವಿಷದ ನಿರ್ಮೂಲನವಾಗದೆ ಭಾರತಕ್ಕೆ ಕಲ್ಯಾಣವಿಲ್ಲವೆಂದು ಒಂದೇ ಸವನೆ ಹೇಳುತ್ತಲೇ ಇರುವುದನ್ನು ನೀನು ಪತ್ರಿಕೆಯಲ್ಲಿ ಓದುತ್ತಿರುವೆಯಲ್ಲವೆ?

ನಿರಾಶ್ರಿತರ ಕರುಣಕತೆಯನ್ನು ಕೇಳಿದರೆ ಕರಳು ಕಳಚಿಬೀಳುವವು. ಅವರು ಮನೆಮಾರು ಕಳೆದುಕೊಂಡು ನಿರ್ಗತಿಕರಾಗಿ ಬೀದಿಯ ಅಂಚಿನಲ್ಲಿ ಮೈದಾನದಲ್ಲಿ ಮರದ ಕೆಳಗಡೆ ಮೃಗಗಳಂತೆ ಸಂಸಾರ ಜೀವನವನ್ನು ಸಾಗಿಸುತ್ತಿರುವುದನ್ನು ನೋಡುವುದು ನಮಗೆ ಅತಿ ಸಾಮಾನ್ಯವಾದ ಮಾತಾಗಿದೆ. ಅದನ್ನು ಹೇಗಾದರೂ ಗಟ್ಟಿಮನಸ್ಸು ಮಾಡಿಕೊಂಡು ನೋಡಬಹುದು. ಆದರೆ ತಾವು ಸ್ತ್ರೀಯರು. ತಮ್ಮ ಲಜ್ಜೆಯೇ ತಮಗೆ ದೇವರು ಎಂಬ ಆರ್ಯಸ್ತ್ರೀಯ ಮರ್ಯಾದೆಯನ್ನು ಬೀದಿಯಲ್ಲಿ ಮಾರಿ ನಾಲ್ಕಾಣೆಗಾಗಿ ಏತಕ್ಕಾದರೂ ಸಿದ್ಧವಾಗಿರುವ ಈ ನಡುಹರೆಯದ ಹುಡುಗಿಯರನ್ನು ನೋಡುವುದೆಂತು ಸಾಧ್ಯ? ಭಾರತವು ನೀತಿಪ್ರಧಾನವಾದರಾಷ್ಟ್ರ. ಓರ್ವ ಸೀತೆ ಅಬಲೆಯಾಗಿ ಏಕಾಕಿಯಾಗಿ ಕಾಮುಕಿ ದಶಮುಖರಾವಣನಿಗೆ ಮಾರಿಯಾಗಿ ನಿಂತ ಆರ್ಯಭೂಮಿ ಇದು. ಪ್ರತಿಯುಗದಲ್ಲೂ ಯುಗಶಕ್ತಿಯಾಗಿ ಸ್ತ್ರೀಯು ವಿಜೃಂಭಿಸಿದ ಭಾರತದಲ್ಲಿ ಇದಾವ ಕೇಡಿಗೇ ಈ ಪರಿಸ್ಥಿತಿ ಬಂದಿತೋ?

ಸೈಕಲವಾಲಿಯ ಹತ್ತಿರ ನಿಜವಾಗಿಯೂ ಒಂದು ಪೈಯೂ ಇದ್ದಂತೆ ತೋರಲಿಲ್ಲ. ಆತ ಎಷ್ಟು ಹೇಳಿದರೂ ಅವರಿಗೆ ಚಾರಾಣೆ ಲಾಭವಾಗದೆ ಬಿಡುವಂತಿರಲಿಲ್ಲ. ಸೈಕಲನ್ನು ನೆಲಕ್ಕೆ ಉರುಳಿಸಿದರು. ಬೆಲ್ಲು ಬಾರಿಸಿದರು. ಅದರ ಮೇಲೆ ಹತ್ತಿ ಕುಣಿದರು. ದಾರಿಯಲ್ಲಿ ಹೋಗುವವರ ಲಕ್ಷ್ಯ ಸೆಳೆಯುವಂತೆ ಕೇಕೆಹಾಕಿ ನಕ್ಕರು. ಆದರೂ ಅವರಿಗೆ ನಾಲ್ಕಾಣೆ ದೊರೆಯಲಿಲ್ಲ. ಸೈಕಲ್‌ವಾಲಿಯು ನಿರುಪಾಯವಾಗಿ, ನಮ್ಮ ಮನೆ ಹತ್ತಿರವಿದೆ; ಅಲ್ಲಿಗೆ ನನ್ನೊಡನೆ ಬನ್ನಿ ಕೊಡುವೆನು ಎಂದನು. ಸರಿ ಅವನ ಮೈಗೆ ಮೈ ತಗಲಿಸುತ್ತಾ, ಬೆನ್ನು ಹಿಡಿದು ಚಪ್ಪರಿಸುತ್ತ ಅವನ ಮನೆಯ ಕಡೆಗೆ ಚಾರಾಣೆಗಾಗಿ ಹೊರಟರು!

ಪೂರ್ಣೀ, ನನ್ನಿಂದ ನೋಡಲಾಗಲಿಲ್ಲ. ಸೀದಾ ಒಳಗೆ ಬಂದು ಮೇಜಿಗೆ ಆತು ಕುಳಿತು ನನ್ನ ವ್ಯಸನವಷ್ಟನ್ನು ಈ ಪತ್ರದಲ್ಲಿ ತೋಡಿಕೊಂಡಿರುವೆನು. ಇಂತಹ ಭಾವನೆಯ ಬಡಿತಗಳನ್ನೂ ಭಾವದೇಶ್ವರಿಯಾದ ನಿನ್ನಲ್ಲಿಲ್ಲದೆ ಇನ್ನಾರಲ್ಲಿ ಹೇಳಿಕೊಳ್ಳಲಿ ?

ಸ್ತ್ರೀಯು ಆಡುವ ಮಾತೂ ಸುಶ್ರಾವ್ಯವಾದ ಸಂಗೀತದಂತಿರಬೇಕೆಂದು ಆಕೆ ಗಟ್ಟಿಯಾಗಿ ಒರಟಾಗಿ ಎತ್ತಿದ ಕರಟುದನಿಯಲ್ಲಿ ಮಾತನಾಡಿದರೆ, ಆಕೆಯ ನಯವಿಹೀನೆಯೆಂದು ಭಾವಿಸಿಬಿಡುವ ನನಗೆ ಇಂತಹ ಪ್ರಸಂಗಗಳೂ ಒದಗಬಾರದೆಂದು ನಾನು ಬಹಳ ಜಾಗರೂಕನಾಗಿರುವೆನು. ಆದರೆ ನದಿಯಲ್ಲಿ ಈಜುವಾಗ ಮೈಗೆ ನೀರು ಅಂಟದಂತೆ ನೋಡಿಕೊಳ್ಳುವುದು ಸಾಧ್ಯವೆ ? ಪೂರ್ಣಿ ಹೇಳು.

ಇತಿ ನಿನ್ನ ಪತಿ

X X X

[ ೧೪ ]

ಪಿ, ಪಿ, ಪೂರ್ಣಿ,

ನಿನಗೆ ಬುದ್ಧಿ ಇಲ್ಲವೆ? ನೀನು ಅಲ್ಲಿಗೆ ಹೋಗಬಾರದಿತ್ತು. ಹೋದುದೇಕೆ, ಈ ಮಾರುದ್ದ ರೋದನದ ಕೊರಗಿನ ಪತ್ರವೇಕೆ ? ನಾನು ಇಲ್ಲದ ಜಾಗದಲ್ಲಿ ನಿನಗೇನು ಕೆಲಸ ? ಇರುವ ಸಂಕಟವೇ ವ್ಯಸನವೇ ಸಾಕಾಗಿದೆ. ಕೆರೆದು ಹುಣ್ಣು ಮಾಡಿಕೊಳ್ಳಬೇಕೇಕೆ ?

ಗೊತ್ತಿದೆ ನಿನಗೆ ಅವರೆಲ್ಲರ ಸ್ವಭಾವ ? ಅವರು ಸಮಯ ಕಾದು ತಮ್ಮ ಕಣ್ಣುರಿಯನ್ನು ತೀರಿಸಿಕೊಳ್ಳಬೇಕೆನ್ನುವವರು. ನಾನು ನನ್ನ ತಂಗಿಯನ್ನು ದೂಷಿಸುವುದಿಲ್ಲ. ಅವಳ ಅತ್ತೆ ಮಾವಂದಿರನ್ನೂ ದೂಷಿಸುವುದಿಲ್ಲ. ಸಾರಾಸಾರ ವಿವೇಚಿಸದೆ ಮಕ್ಕಳು ಮರಿಗಳನ್ನು ಕಟ್ಟಿಕೊಂಡು ನಿನ್ನ

ಅತ್ತೆಯ ಪುಣ್ಯ ತಿಥಿಯನ್ನು ಮಾಡಲು ಅಲ್ಲಿಗೆ ಹೋದ ನಿನ್ನನ್ನೇ ದೂಷಿಸು ವೆನು. ಒಂದೊಂದು ಸಾರಿ ನೀನೆಷ್ಟು ಅಭಿಮಾನಕ್ಕೊಳಗಾಗುವೆ, ಅದೂ ನನ್ನ ಕೋಪ ಕಲಕುವಷ್ಟರಮಟ್ಟಿಗೆ!

ಅಮ್ಮ ಸತ್ತು ಹನ್ನೆರಡು ವರುಷವಾಯಿತು. ಅಪ್ಪ ಸನ್ಯಾಸಿಯಾಗಿ ಹತ್ತು ವರುಷವಾಯಿತು. ಇಷ್ಟು ದಿನದ ವರೆಗೆ ಸನ್ಯಾಸಿಯವರಿಗೆ ನನ್ನ ಅಮ್ಮನ ನೆನಪು ಇರದೆ, ಈ ವರುಷವೇಕೊ ತನ್ನ ಹೆಂಡತಿಯ ನೆನಪು ಬಂದಿತೋ? ಅಮ್ಮನ ಹೆಸರಿನಲ್ಲಿ ಆರಾಧನೆ. ಪೂರ್ಣೀ, ನಿನ್ನ ಪತ್ರಕ್ಕೆ, ನೀನು ಅಪ್ಪನ ಸನ್ಯಾಸಾಶ್ರಮಕ್ಕೆ ಹೋಗಿ ಅತ್ತೆಯ ಆರಾಧನೆಗೆ ಹೋಗಿ ಅನ್ನಿಸಿ ಕೊಂಡು ಬಂದುದಕ್ಕೆ ಚೆನ್ನಾಗಿ ಬುದ್ಧಿ ಹೇಳಬೇಕೆಂದು ಸಿಟ್ಟಿನಿಂದ ಕುಳಿತು ಕೊಂಡ ಕೂಡಲೇ ನನ್ನ ನೆನಪು ಅಮ್ಮನನ್ನು ಕಳೆದುಕೊಂಡ ದಿನಗಳತ್ತ ಹೋಗಿಯೇಬಿಟ್ಟಿತು. ಇನ್ನು ಅದೆಲ್ಲವನ್ನೂ ಎದೆಯಿಂದ ಕಾಗದದ ಮೇಲೆ ಇಳಿಸದಿದ್ದರೆ ಲೇಖನಿಯು ಮುಂದಕ್ಕೋಡುವುದೇ ಇಲ್ಲ.

ಕಾಳಮ್ಮನವರ ಮನೆ, ಮೈಸೂರಿನ ಹಳೆಯ ಅಗ್ರಹಾರ, ಅಮ್ಮ ಸತ್ತ ಶುಕ್ರವಾರ, ಈ ಮೂರೂ ನನ್ನೆದುರಿಗೆ ಧುತ್ತೆಂದು ಬಂದು ನಿಂತವು. ಕೊರಗಿ ಸಣ್ಣಾಗುವುದೊಂದೇ ಅಮ್ಮನಿಗಿದ್ದ ಖಾಯಿಲೆ. ಛಳಿಯಿಲ್ಲ, ಜ್ವರವಿಲ್ಲ. ಆದರೂ ಅಮ್ಮ ಸತ್ತುಹೋದಳು. ಕಛೇರಿಗೆ ಹೋಗುತ್ತಿದ್ದ ನನ್ನನ್ನು ಹೋಗಬೇಡವೆಂದು ಅಂದು ತಡೆದು ಸುಖವಾಗಿ ಕುಳಿತು ಪ್ರಾಣ ಬಿಟ್ಟಳು. ತಾನೇ ಅಡಿಗೆ ಮಾಡಿದಳು. ತನಗೆ ಬಲು ಇಷ್ಟವಾದ ಬೆಲ್ಲದ ಅನ್ನ ವನ್ನು ಮಾಡಿ ದೇವರಿಗೆ ನಿವೇದಿಸಿ, ಮಧ್ಯಾಹ್ನದ ಪೂಜೆಸಲ್ಲಿಸುತ್ತಿರುವಾಗಲೇ ಆಕೆಯ ಭಜನೆಯ ಸ್ವರದಲ್ಲಿ ಏನೊ ಒಂದು ಹೊಸ ಬಗೆಯ ರವವಿದ್ದಿತು. ಎಷ್ಟು ಹೊತ್ತು ಆ ಪೂಜೆ! ಅದೆಷ್ಟು ಹೊತ್ತು ತಾಳ ತಟ್ಟುತ್ತ ಕುಣಿವ ಕುಣಿತ! ದಿನದ ಪೂಜೆಗಿಂತಲೂ ಏನೊ ಹೊಸದಾಗಿ ಕಂಡಿತು. ಆದರೂ ನಾನೆಂತು ಅಮ್ಮನ ಅಂತ್ಯವನ್ನು ಅಷ್ಟರಿಂದಲೇ ಊಹಿಸಲಿ?

ಪೂಜೆ ಮುಗಿಯುವದರೊಳಗಾಗಿ ಹೊರಗೆ ಹೋದ ಅಪ್ಪ ಬಂದರು. ಬಂದೊಡನೆಯೇ ಅವರನ್ನು ಕರೆದು ಪೂಜೆಗೆ ಕುಳ್ಳಿರಿಸಿಕೊಂಡು ಅವರ

ಪಾದ ತೊಳೆಯಲಾರಂಭಿಸಿದಳು. ಪ್ರತಿ ದಿನ ಬೆಳಗಿನ ಜಾವದಲ್ಲಿ ಆಗುತ್ತಿದ್ದ ಈ ನಿತ್ಯ ವಿಧಿಯು ಮತ್ತೊಮ್ಮೆ ಈ ನಡುಹಗಲಲ್ಲಿ ಏಕೆ ಎಂಬುದು ಅರ್ಥವಾಗಲಿಲ್ಲ.

ಏ ಹುಚ್ಚೀ, ಇದೇನು ಈಹೊತ್ತು ಇಷ್ಟು ಹೊತ್ತಿಗೆ ಈ ಪೂಜೆ ಎಂದವರು ಎಂದೂ ಕಾಣದ ಪ್ರಸನ್ನ ಮುಖಮುದ್ರೆಯಿಂದ ಅಮ್ಮನನ್ನು ಕೇಳಿದರು, ನೋಡಿದರು. ಅಮ್ಮನಿಗೆ ಅದೇ ಮಹಾಭಾಗ್ಯವಾಯಿತು. ತಲೆ ಎತ್ತಿ ನೋಡಿದರು. ಪಾದಗಳಮೇಲೆ ತಲೆಯನ್ನು ಹೊರಳಾಡಿಸಿ "ನಾನೇನಾದರೂ ತಪ್ಪು ಮಾಡಿದ್ದರೆ ಕ್ಷಮಿಸಿಬಿಡಿ. ಇದೇ ನನ್ನ ಕೊನೆಯ ಪೂಜೆ," ಎಂದು ನನ್ನ ಕಡೆಗೆ ತಿರುಗಿ ನನ್ನ ಹೆಗಲಿನ ಆಸರವನ್ನು ಬಯಸಿದರು. ಅಪ್ಪನಿಗೆ ಇದರ ಅರ್ಥವೇ ಆಗಲಿಲ್ಲ. "ಹೋ, ಹೋ, ನಿಮ್ಮಮ್ಮ ಕಾಯ ಬೆರಸೆ ಕೈಲಾಸಕ್ಕೆ ಹೋಗಿಬಿಡುವಳು ಈಹೊತ್ತು" ಎಂದು ಹಾಸ್ಯಮಾಡಿದರು. ಎರಡು ತಿಂಗಳ ಕೂಸು ಲೀಲಾಳನ್ನು ತೊಡೆಯಮೇಲಿಟ್ಟುಕೊಂಡು ಕತ್ತಲು ಕೋಣೆಯ ಬಾಣಂತಿಯಾಗಿದ್ದ ನಿನಗೂ ಇದೆಲ್ಲವೂ ಕೇಳಿಸಿದ್ದರೂ ಹಗಲು ನಿದ್ದೆಯ ಗೊರಕೆ ನಮಗೂ ಕೇಳಿಸುತ್ತಿತ್ತು.

ಮಧ್ಯಾಹ್ನ ಒಂದು ಗಂಟೆಯ ಸಮಯ; ಎಂದೂ ಆರಾಮ ಕುರ್ಚಿಯ ಮೇಲೆ ಕುಳಿತುಕೊಳ್ಳದ ಅಮ್ಮ ಅಂದು ಕುಳಿತುಕೊಳ್ಳಲು ಆಶಿಸಿದಳು. ನನಗೂ ನಗು ಬಂತು. ಕುರ್ಚಿಯನ್ನು ಹಾಕಿಕೊಟ್ಟೆ. ಒರಗಿ ಕುಳಿತಾಗ ನನ್ನನ್ನು ಹತ್ತಿರ ಕರೆದು ಬಲದ ಕೆನ್ನೆಗೆ ಮುತ್ತಿಡುತ್ತ ಎಡದ ಕೆನ್ನೆಯನು ಸವರಿದಳು. ನನ್ನ ಮೈಮೇಲೆ ಬಿಸಿನೀರು ಚೆಲ್ಲಿದಂತಾಯಿತು. ನನ್ನ ತಲೆಯನ್ನು ತೊಡೆಯ ಮೇಲೆ ಇಟ್ಟುಕೊಂಡಳು. ಅನಂತರ ಒಂದು ಗಳಿಗೆ ಗೀತೆಯನ್ನು ತೆಗೆದುಕೊ ಹದಿನೆಂಟನೆಯ ಅಧ್ಯಾಯವನ್ನು ಓದು ಎಂದಳು. ಅಪ್ಪನು ವಿಶ್ವರೂಪದರ್ಶನದ ಹನ್ನೊಂದನೆಯ ಅಧ್ಯಾಯವನ್ನು ಓದು ಎಂದು ಸೂಚಿಸಿದರು. ಕೊನೆಗೆ ಅಮ್ಮನ ಕೋರಿಕೆಯಂತೆ ಹದಿನೆಂಟನೆಯ ಅಧ್ಯಾಯದ ಶ್ಲೋಕಗಳನ್ನು ಓದಿದಾಗ ನಿತ್ಯ ಪಾರಾಯಣ ಕಾಲದಲ್ಲೇ ಕೇಳುವಂತೆ ಕೇಳಿದಳು, "ಸರ್ವಧರ್ಮಾನ್ ಪರಿತ್ಯಜ್ಯಮಾಮೇಕಂಶರಣಂ ವ್ರಜ"॥ ಎಂಬ ಶ್ಲೋಕವನ್ನು ಓದಿದಾಗ ಇನ್ನೊಮ್ಮೆ ಓದು ಎಂದಳು. ತಾನೂ ಬಾಯಲ್ಲಿ

ಅನ್ನಲಾರಂಭಿಸಿದಳು. ಓದು ಬರದ ಬಾಯಿ ಅದು; ಈ ಶ್ಲೋಕವನ್ನು ವಿಪ್ರಕಂಠದ ವೇದಘೋಷದಂತೆ ಅನ್ನುತ್ತಿದ್ದಾಗ ಕೇಳುತಿದ್ದ ನನ್ನ ಎದೆ ಝಲ್ಲೆಂದಿತು. ಅರ್ಥವನ್ನು ಕೇಳಿಕೊಂಡಳು, ಆಮೇಲೆ ಕಷ್ಟಪಟ್ಟು ಕೂತು ಕೊಂಡು "ಮೂಕಂ ಕರೋತಿ ವಾಚಾಲಂ ಪಂಗುಂ ಲಂಘಯತೆ ಗಿರಿಂ" ಎಂಬ ಪ್ರಾರ್ಥನಾ ಗೀತೆಯನ್ನು ಅನ್ನುತ್ತಿರುವಾಗಲೇ ಅಮ್ಮನ ಧ್ವನಿ ಕುಗ್ಗಿ ದಂತಾಯಿತು.

ನನ್ನನ್ನು ಅವಸರ ಅವಸರವಾಗಿ ಹತ್ತಿರ ಕರೆದಳು. ಮುಂಗುರುಳು ಸೇವಿಸಿ ಪಕ್ಕದಲ್ಲಿದ್ದ ಅಪ್ಪನಿಗೆ ಕಾಲು ಮುಟ್ಟಿ ನಮಸ್ಕರಿಸಿದಳು. ಕಂಠ ಬಿಗಿದು ಬಂದಿತ್ತು "ನನ್ನ ತಪ್ಪನ್ನು ಕ್ಷಮಿಸಿರಿ" ಎಂದು ಇನ್ನೊಮ್ಮೆ ಕೇಳಿ ದಾಗ ಇಬ್ಬರ ಕಣ್ಣಿನಲ್ಲೂ ಒಂದೇ ಸಾರಿ ನೀರು ಚಿಮ್ಮುತ್ತಿತ್ತು. ಅಂದು ಚಿಮ್ಮಿದ ಅಮ್ಮನ ಕಣ್ಣೀರಿನಲ್ಲಿ ಅಪ್ಪನ ಕಣ್ಣೀರಿನ ಸಂಗಮವಾಗಿ ಅಮ್ಮ ನನ್ನು ಅಪ್ಪ ಒಂದು ದುಡಿಯುವ ಎತ್ತಿನಂತೆ ಬಳಸಿಕೊಂಡ, ಜ್ಞಾನ ಸ್ನಾನ ವಾಗಿರಬೇಕು. ಪೂರ್ಣೀ, ಅಮ್ಮನ ಕ್ಷಮಾಯಾಚನೆಯು ಕೊನೆಯು ಉಸಿರೇ ಅಪ್ಪನನ್ನು ಸನ್ಯಾಸಿಯನ್ನಾಗಿ ಮಾಡಿಸಿದ ವಿಶ್ವಶಕ್ತಿಯೆಂದು ನನಗೆ ಆಮೇಲೆ ತಿಳಿಯುತ್ತ ಬಂದಿತು. ಇದೇ ಶಕ್ತಿಯೇ ಅಪ್ಪನು ನನ್ನನ್ನು ಬೀಡಗೆಳೆದು ಹೋಗಿಬಿಟ್ಟಾಗ ಬೇಡವೆಂದರೂ ಅಪ್ಪನನ್ನು ತಡೆಯದೆ ನಿಲ್ಲಿಸಿತ್ತೇನೋ? ನೀನು ಮಾತ್ರ ಮಾತು ಸುಮ್ಮ ಸುಮ್ಮನೆ ನಿನ್ನ ಮೇಲೆ ಬರುವದೆಂದು ಹೆದರಿ ಕಾಲಿಗೆ ಬಿದ್ದಾಗ ಮುಂದೇನು ಮಾಡುವುದು ತಿಳಿಯದೆ ನಾನು ಸುಮ್ಮನಾದೆನು.

ಅಮ್ಮ ಮುಂದೆರಡು ನಿಮಿಷಗಳಲ್ಲಿ ಕೊನೆಯುಸಿರನ್ನೆಳೆದಳು. ಆಗ ಅಮ್ಮನು ನನಗೆ ಹೇಳಿದ ಮಾತೊಂದನ್ನು ನನ್ನ ಕೊರಳಲ್ಲಿ ಮುತ್ತಿನ ಹಾರವನ್ನಾಗಿ ಮಾಡಿ ಹಾಕಿಕೊಂಡಿರುವಾಗ, ಜನರನ್ನು ಮೆಚ್ಚಿಸುವ ಈ ವಾರ್ಷಿಕ ತಿಥಿಗಳ ಅವಶ್ಯವೇನು ನನಗೆ? ಅಮ್ಮನ ಹೆಸರಿನಲ್ಲಿ ದಾನ ಧರ್ಮ ಮಾಡಿ ಆಕೆಗೆ ಪುಣ್ಯಗಳಿಸಿಕೊಡಬೇಕೆಂಬ ಅವಶ್ಯಕತೆಯಿಲ್ಲ. ಆಕೆ ತನ್ನ ಮೂವತ್ತು ವರುಷ ದಾಂಪತ್ಯ ಜೀವನದಲ್ಲಿ ಪತಿವ್ರತೆಯಾಗಿ ಗಂಡನಕೋಪ, ದುಡುಕು ಮುಂತಾದವುಗಳಿಗೆಲ್ಲಾ ಈಡಾಗಿ ಸಂಯಮನದಿಂದ ಹಿಮಾಲ

ಯದಷ್ಟು ಪುಣ್ಯವನ್ನು ಗಳಿಸಿದ್ದಾಳೆ. ಅಮ್ಮನ ಆ ಪುಣ್ಯದಿಂದಲೇ ಕಳ್ಳರು ದೋಚಿಕೊಂಡು ಹೋಗದಂಥ ಭಾವನಾ ಸಂಪತ್ತಿನಲ್ಲಿ ನಾವು ಕುಬೇರರಾಗಿ ಬದುಕುತ್ತಿದ್ದೇವೆ.

ಅಮ್ಮ ಏನು ಹೇಳಿ ಹೋದಳೆಂಬುದು ನಿನಗೆ ಗೊತ್ತಿದೆಯಲ್ಲವೆ? '' ಬಡವನಾಗಿಯೇ ಕೊನೆಯವರೆಗೂ ನೀನಿರು ಮಗು. ಆಗ್ಲೇ ನಿಂಗೆ ಬಡವರನ್ನು ಕಂಡರೆ ಮರ್ಕ ಬರ್ತದೆ. ಇದೊಂದು ಗುಣಾನೇ ಸಾಕು-ದೇವರು ನಿನ್ನ ಕಾಪಾಡ್ತಾನೆ '' ಎಂದು ಹೇಳಿದ ತಾಯಿಯ ಮಾತು ನನಗೆ ವರಶಕ್ತಿಯಾಗಿದೆ. ಬಡವನಾಗಿ ಬಡವನಿಗೆ ಮರುಗುವುದಷ್ಟೇ ನನ್ನಿಂದಾಗುತ್ತಿರುವ ಕೆಲಸ. ಅವರ ಕಷ್ಟ ಪರಿಹರಿಸಲಾಗುವುದಿಲ್ಲವೆಂಬ ವ್ಯಥೆಯು ನನಗಿಲ್ಲವಾದರೂ ನಾನು ಅವರಿಗಾಗಿ ಪಡುವ ಸಂಕಷ್ಟದಲ್ಲಿ ನಿಜವಾದ ಅನುತಾಪವಿದ್ದರೆ ಖಂಡಿತವಾಗಿಯೂ ಅದೊಂದು ವಿಶ್ವಶಕ್ತಿಯಲ್ಲಿಯ ಸಣ್ಣ ಅಣುವಾಗಿ ಇರುವುದೆಂಬ ವಿಶ್ವಾಸವು ನನಗಿರುವುದರಿಂದಲೇ ನಾನು ನನ್ನ ಭಾವನಾಶಕ್ತಿಯನ್ನೆಲ್ಲ ನಿನ್ನೆದುರಿಗೆ ಇಂತು ಪ್ರಕಟಿಸುತ್ತಿರುವೆನು. ಇದನ್ನು ಸ್ವೀಕರಿಸುವಂತೆ ಹೃದಯವು ನಿನ್ನದಾಗಿರುವುದು, ನನ್ನ ಪುಣ್ಯವೇ. ನಾನು ಬರೆದ ಪತ್ರಗಳನ್ನೂ ಓದಲಾರದಂತಹ ಓದಿದರೂ ಅರಗಿಸಿಕೊಳ್ಳದಂತಹ, ಹೆಂಡತಿಮಾತ್ರ ನನಗೆ ಸಿಕ್ಕಿದ್ದರೆ ಕೇಳಬೇಕೇ ನನ್ನ ಜೀವನ ನಾಟಕದ ವೈವಿಧ್ಯತೆಯನ್ನು ?

ಅಮ್ಮನು ಸತ್ತ ಆರುತಿಂಗಳಲ್ಲಿಯೇ ಅಪ್ಪನ ಜೀವನದಲ್ಲಿ ಕ್ರಾಂತಿಯಾಗತೊಡಗಿತು. ಅವರ ಸಿಟ್ಟು ಸಿಡುಕಿಗೆ ನೀನು ಸಾಕಷ್ಟು ತಡೆದುಕೊಂಡರೂ,ನಾನೂ ಶಕ್ತಿಮೀರಿ ಸಹಿಸಿದರೂ,ಆ ಸಹನೆಯೇ ಅವರನ್ನು ಮನೆಯಲ್ಲಿರಗೊಡಿಸದಂತಾಯಿತು.ಆದರೂ ಅಂದು ಅಪ್ಪ ಬಹುರೇಗಿದ್ದಾಗ ನಾನು ಆಡಿದ ಮಾತನ್ನು ಆಡದಿದ್ದರೆ, ಅಪ್ಪನು ಸನ್ಯಾಸಿಯಾಗುತ್ತಿರಲಿಲ್ಲವೆಂದೆನಿಸುತ್ತದೆ. ನನಗೆ ಕೊಟ್ಟ ಕಷ್ಟಗಳನ್ನೆಲ್ಲಾ ಸಹಿಸಿಕೊಂಡೆನು. ನಿನಗೆ ಕೊಡುತ್ತಿರುವ ವಿಚಿತ್ರವ್ಯಥೆ ನೋಡಿ ನೋಡಿ ಸುಮ್ಮನಿದ್ದೆನು. ಏಕೆಂದರೆ ಅವರು ನನ್ನನ್ನು ಬಲು ಮಮತೆಯಿಂದ ಪ್ರೀತಿಸುತ್ತಿದ್ದರು. ಅವರ ಪ್ರೀತಿ ಋಷ್ಯಶೃಂಗನನ್ನು ಪ್ರೀತಿಸಿದ ವಿಭಾಂಡಕನ ಪ್ರೀತಿಯಂತಿದ್ದಿತು.ನಾನುಎರಡು

ಮಕ್ಕಳ ತಂದೆಯಾಗಿದ್ದರೂ ಉದ್ಯೋಗದಲ್ಲಿ ಪ್ರತಿಷ್ಠಿತ ಸ್ಥಾನಮಾನವನ್ನು ಪಡೆಯಲಾರಂಭಿಸಿದ್ದರೂ ನನಗೆ ಇನ್ಯಾವ ಸ್ವಾತಂತ್ರ್ಯವೂ ಬೇಕಿರಲಿಲ್ಲ. ಕೊನೆಗೆ ನನ್ನ ಒಳ್ಳೆಯ ಸ್ನೇಹಿತರು ಮನೆಗೆ ಬಂದು ಹೋಗುವ ಸೌಲಭ್ಯ ವನ್ನು ಮಾತ್ರ ಕೇಳಿಕೊಂಡಿದ್ದೆನು. ಸ್ನೇಹಿತರ ಸಹವಾಸದಿಂದ ತನ್ನ ಮಗನೆಲ್ಲಿ ಕೆಟ್ಟುಹೋಗುವನೋಯೆಂಬ ಸದಭಿಲಾಷೆ ಅಪ್ಪನಿಗೆ ಇದ್ದರೂ ನನಗೆ ಆಗ ಅದು ಸ್ವಲ್ಪ ಅತಿಯಾದಂತೆ ಕಂಡಿತು. ಆದರೂ ನನ್ನ ಅತ್ಯಂತ ಪ್ರೀಯ ಸ್ನೇಹಿತನನಾದ ಶಂಕರ ಒಂದು ದಿನ ಮನೆಗೆ ಬಂದಾಗ ಆತ ನನ್ನೊ ನಡೆಸಿಕೊಂಡರೀತಿ, ಇಬ್ಬರಿಗೂ ಆದ ಬಿಸಿಮಾತು ಇವು ನನ್ನ ಮನಸ್ಸನ್ನು ನೋಯಿಸಿದವು. ಶಂಕರನಿಗೆ ತಿಳಿಯಹೇಳಿದೆ. ಅದನ್ನವನು ನುಂಗಿಕೊಂಡ. ಆದರೂ ನನ್ನ ನೋವು ಅಪ್ಪನಿಗೆ ಅರ್ಥವಾಗಲಿಲ್ಲ.

ನೆನಪಿದೆಯ ಪೂರ್ಣೀ? ಒಂದು ದಿನ ನಿನ್ನ ತಾಯಿ ನಿನ್ನನ್ನು ನೋಡಲು ಬಂದಾಗ ಆಕೆಯನ್ನು ಹೊರಬಾಗಿಲಿಂದ ಒಳಗೆ ಬಿಡದೆ, ನಿನ್ನನ್ನು ಒಳಬಾಗಲಲ್ಲಿಟ್ಟು ಕದಹಾಕಿದ ಆದೃಶ್ಯ? ಅಂದು ನಾನು ತಂದೆಯ ವಿರುದ್ಧ ಸಿಡಿದೇಳಬೇಕಾಗಿದ್ದಿತು. ನಿನ್ನ ವಕೀಲಿಗಾಗಿಅಲ್ಲ. ಮಗಳನ್ನು ನೋಡಲು ತಾಯಿಗೆ ಯಾವಾಗಲೂ ಪೂರ್ಣ ಹಕ್ಕಿರುವುದೆಂಬ ಸಿದ್ಧಾಂತ ವನ್ನು ಒತ್ತಿ ಹೇಳಲು ತಲೆಯೆತ್ತಿ ನಿಂತೆನು. ಮಾತು ತುಟಿಯೊಳಗೆ ಅಡಗಿ ಕೊಂಡವು. ಇನ್ನೊಂದು ಸಾರಿ ನಿಮ್ಮ ತಂದೆ ಬಂದಾಗಲೂ ನಿನ್ನನ್ನು ನೋಡಲು ಮತ್ತೆ ತಿರುಗಿ ಬಂದರೆಂದು ಅವರ ಮೇಲೆ ರೇಗಿಬಿದ್ದು ಒಬ್ಬರಿ ಗೊಬ್ಬರು ಕೈ ಕೈ ಮಿಲಾಯಿಸಹತ್ತಿದಾಗ ನಾನು ನಿನ್ನ ಗಂಡನಾಗಿ ಅಲ್ಲ ದಿದ್ದರೂ ಒಬ್ಬ ಧ್ಯೇಯವಾದಿಯಾಗಿ ನಿಂತು ನೋಡುತ್ತಿದ್ದೆ; ಈ ವರ್ತನೆ ಯನ್ನು ಹೇಗೋ ಸಹಿಸಿಕೊಂಡೆ. ಆದರೂ ಪರಿಸ್ಥಿತಿ ತೀರ ಮಿತಿಮೀರಿದಾಗ ಉಪಾಯವಿಲ್ಲದೆ ನ್ಯಾಯಾಧಿಪತಿಯು ತೀರ್ಮಾನ ಹೇಳುವಂತೆ ಇಬ್ಬರ ಮಧ್ಯ ನಿಂದು, "ಮಾವನವರೇ, ನೀವು ನಿಮ್ಮ ಮಗಳನ್ನು ಎಷ್ಟುಸಾರಿ ಬೇಕಾದರೂ ಬಂದು ನೋಡಿಕೊಂಡು ಹೋಗಬಹುದು. ಇದಕ್ಕೆ ಯಾರೂ ನಿಮ್ಮನ್ನು ಅಡ್ಡಿಪಡಿಸಲಾರರು" ಎಂದು ಹೇಳಿಯೇ ಬಿಟ್ಟೆ.

ಅಪ್ಪನಿಗೆ ನೋವು ಆಯಿತು; ಅಂದೇ ಅವರ ಅಭಿಮಾನಕ್ಕೆ ಪೆಟ್ಟು ಬಿದ್ದಿತು. ಅಪ್ಪನ ಮಗನಪ್ರೀತಿಯೆಲ್ಲವೂ ಕುಸಿದು ಬಿದ್ದಿತು. ಅಂದಿನಿಂದ ಹೆಚ್ಚಾಗಿ ನನ್ನ ಮತ್ತು ನಿನ್ನ ಅಂತರಂಗ ಜೀವನದಲ್ಲಿ ಅವರು ಅಡ್ಡ ಬರುತ್ತಿರಲಿಲ್ಲ. ಆದರೇನು? ಮನಸ್ಸಿನಿಂದ ಮಗನಿಗೆ ಸ್ವಾತಂತ್ರ್ಯವನ್ನು ಇನ್ನೂ ಕೊಟ್ಟಿರಲಿಲ್ಲ.

ಇಂತಹ ಮೌನವಾತಾವರಣದಲ್ಲಿ ಇಡೀ ಕುಟುಂಬಕ್ಕೆ ನೆಮ್ಮದಿ ಇರಲಿಲ್ಲ. ನಾನು, ನೀನು ಹೇಳುವದನ್ನೆಲ್ಲ ಕೇಳಿದರೂ, ಅನುಭವಿಸುವದನ್ನೆಲ್ಲ ನೋಡಿ ದರೂ, ಸುಮ್ಮನೆ ಕಾಣದವನಂತೆ ಇರುತ್ತಿದ್ದೆ. ಏಕೆಂದರೆ, ಅಪ್ಪನ ಸುಹೃದ ಯವು ಅವರು ನನಗಾಗಿ ಪಟ್ಟಿರುವ ಕಷ್ಟ ಇವುಗಳು ನನ್ನನ್ನು ಸುಮ್ಮನಿರು ವಂತೆ ಮಾಡಿದವು. ಒಬ್ಬನೇ ಮಗನೆಂದು ಬಡತನದ ಬಾವಿಯಲ್ಲಿ ಮುಳುಗಿ ಹೋಗಿದ್ದರೂ ಅವರು ನನಗೆ ಓದು ಕಲಿಸಲು ಪಟ್ಟ ಪಾಡನ್ನು ಈಗ ನೆನೆದು ಕೊಂಡರೆ ನನಗೆ ದುಃಖವೆನಿಸುತ್ತದೆ. ಸಿರಿವಂತರಾದ ಭಾವಮೈದುನರು ನಕ್ಕು, ಅವರ ಅಟ್ಟಹಾಸದ ಮಧ್ಯೆ ನನ್ನ ಬಗ್ಗೆ ತೋರುತ್ತಿದ್ದ ಉದಾಸೀನತೆ ಯಿಂದ (ನಿಮ್ಮ ತಂದೆಯಲ್ಲ ಆದರೆ ಇನ್ನಿಬ್ಬರು ತಮ್ಮಂದಿರು) ಉಮ್ಮಳಿ ಸುತ್ತಾ ಕಳವಳಗೊಂಡ ಅಪ್ಪನ ಜೀವಿತದ ನೋವನ್ನು ನಾನು ಮರೆತಿಲ್ಲ. ಹದಿನೈದು ಮೈಲಿ ದೂರವಿರುವ ಬೆಂಗಳೂರಿಗೆ ತಲೆಯಮೇಲೆ ತಾನು ಮಾಡಿದ ಬಿದಿರು ಕುಕ್ಕೆ ಮರಗಳನ್ನು ಹೊತ್ತುಕೊಂಡು ಹೋಗಿ ಅತಿ ಮಮತೆಯಿಂದ ನನ್ನನ್ನು ಬೆಳೆಸಿದ ಅವರ ಪ್ರೀತಿಗೆ ನಾನು ಎಷ್ಟು ಋಣಿ ಯಾಗಿರಬೇಕು? ಮಗ ಬೆಳೆಯಲೆಂದು, ಮಗ ವಿದ್ಯೆ ಕಲಿಯಲೆಂದು ತನ ಗಿಂತ ಸಾವಿರಪಾಲು ಕೀಳಾದವರನ್ನು, ಅವರು ಓಲೈಸಿದುದನ್ನು ನಾನು ನನ್ನ ಚಿಕ್ಕತನದಲ್ಲೇ ನೋಡಿದ್ದೆನು. ಇಬ್ಬರೂ ಊಟಕ್ಕೆ ಕುಳಿತಾಗ ತನ್ನ ಅನ್ನದ ಮೇಲೆ ಹಾಕಿದ ತುಪ್ಪವನ್ನು ಅಮ್ಮ ತಿರುಗಿ ನೋಡುವ ಮೊದಲೇ ನನ್ನ ತಟ್ಟೆಗೆ ಹಾಕಿ ಕುಳಿತುಕೊಂಡು ಬಿಡುತ್ತಿದ್ದುದನ್ನು ನಾನು ಎಂತು ಮರೆಯಲಿ? ಶನಿವಾರ ಬಂದರಂತೂ ಇಂದಿಗೂ ಅಪ್ಪ ಸನ್ಯಾಸಿಯಾಗಿ ಹತ್ತು ವರ್ಷವಾಗಿದ್ದರೂ ಅವರ ನೆನಪು ಬರದಿರುವದಿಲ್ಲ. ಮನೆಗೆ ಹೆಂಡತಿ ಬಂದು ಮಕ್ಕಳಾಗಿದ್ದರೂ, ಸ್ನಾನದ ಬಚ್ಚಲಲ್ಲಿ ನನ್ನನ್ನು ಕುಳ್ಳಿರಿಸಿ ತಾನೇ ಮೈ ಉಜ್ಜದ ಹೊರತು ಅವರಿಗೆ ಸಮಾಧಾನವಿಲ್ಲ. ಮೈ ನೆರತಬೇಕು, ಹಾಸಿ

ದಪ್ಪವಾದ ರಗ್ಗನ್ನು ತಂದು ಹೊದಿಸಿ ಮಲಗಿಸಬೇಕು. ಮನೆಯಲ್ಲಿ ಸ್ವಲ್ಪವೂ ಸದ್ದು ಮಾಡದಂತೆ ಕಾಯಬೇಕು. ಇದೆಲ್ಲವನ್ನು ನೆನೆಸಿ ಕೊಂಡಾಗ ಅಪ್ಪನ ಕೋಪವನ್ನು ಒಂದುಕ್ಷಣ ತಡೆದುಕೊಳ್ಳುವದು ಅತಿಶಯ ವೇನಲ್ಲ ಎಂದು ಎನಿಸುತ್ತಿತ್ತು.

ಆದರೆ, ಪೂರ್ಣಿ, ಆ ದಿನದ ನೆನಪಾಗಬಾರದು. ಶಾಂತಂ ಪಾಪಂ! ಅಂದೇನೋ ತಂದೆಮಕ್ಕಳ ಸಂಬಂಧ ತೀರಿಬಂದಿತ್ತು. ಅಪ್ಪ ಸನ್ಯಾಸಿಯಾ ಗುವ ಸಮಯ ಯೋಗವು ಒದಗಿ ಬಂದಿತ್ತೋ? ಅಂದು ಅವರು ನಿಷ್ಕಾರಣ ವಾಗಿ ಸಿಟ್ಟಿಗೆದ್ದದ್ದನ್ನು ಸಹಿಸಿಕೊಂಡೆ. ಕೆನ್ನೆಗೆರಡು ಬಿಗಿದುದಕ್ಕೆ ಕೋಪ ಬರಲಿಲ್ಲ. ನನ್ನ ವೈಮೂಳೆಗಳೆಲ್ಲ ಅವರು ಹೇಳಿದಂತೆ ಕೇಳಿರುವಾಗ ಈ ಎಂಟೇಟು ಎಷ್ಟರದು. ಆದರೆ..............ಆದರೆ...............ಬರೆಯಲೇ, ಪೂರ್ಣಿ,

ಅವರು ಸಿಟ್ಟಿನ ಭರದಲ್ಲಿ ಹಾಗೆ ಅನ್ನಬಾರದಿತ್ತು.

ನನ್ನನ್ನು ಬೈಯುವ ಭರದಲ್ಲಿ ಸ್ವರ್ಗವಾಸಿಯಾದ ಅಮ್ಮನಿಗೆ........ ಈ ಮಾತು ಕೇಳಿಸುವದೆಂದು ಅವರಿಗೆ ಅನಿಸಿರಲಿಲ್ಲವೆಂದು ಕಾಣುತ್ತೆ? "ನೀನು ನನ್ನ ಮಗನಾಗಿಲ್ಲ................ನನಗೆ...............ರೇ, ಇಂತು ನೀನು ಎದುರು ಹೇಳುತ್ತಿರಲಿಲ್ಲ" ಎಂದವರು ಮುಂದೇನು ಅನ್ನುತ್ತಿದ್ದರೋ. ಆ ಮಾತನ್ನು ತಡೆಯಬೇಕೆಂದು ಪ್ರಯತ್ನಿಸಿದೆ. ಆದರೆ ಆ ಕೆಟ್ಟ ಮಾತ ನ್ನೂ ಅಂದುಬಿಟ್ಟರು.

ನನ್ನ ಸಿಟ್ಟಿನ ಕಟ್ಟೆ ಒಡೆಯಿತು. ಹೀಗೆ ಅನ್ನುವ ಅವರಿಗೆ ಆ ಅಧಿಕಾರ ವಿರುವದು ನಿಜವಲ್ಲದಿದ್ದರೂ, ಸಿಟ್ಟಿನ ಬೈಗುಳವಿದ್ದಿರಬಹುದು. ನನಗೆ ಆ ಮಾತುಸಹಿಸುವದಾಗಲಿಲ್ಲ. ಆವರೆಂದ ಮಾತು ಸಾಮಾನ್ಯವಲ್ಲ. ಆದರೆ ನನ್ನ ತಾಯಿಯನ್ನು ನಾನು ದೇವರೆಂದು ಭಾವಿಸುತ್ತಿದ್ದ ನನಗೆ ಈ ಮಾತು ಸೇರಲಿಲ್ಲ. ಮಾರುತ್ತರ ಕೊಡುವ ಧೈರ್ಯವಿಲ್ಲದಿದ್ದರೂ ಸಿಟ್ಟಿನಿಂದ ನನಗೇ ನಾನು ಗಡಬಡಿಸ ಕೊಂಡೆನಲ್ಲವೇ ? ತಿಳಿಯಿತು, ಅಪ್ಪನಿಗೆ; ತಾಳ್ಮೆ ಮೀರಿಕೊಂಡು: ತನ್ನ ಮಗ ತನಗೇ ತಿರುಗಿ ಬಿದ್ದನೆಂದು ಅದೇ ವ್ಯಸ

ನಲ್ಲಿ ಅವರು ಉಪವಾಸ ಮಾಡಿದರು. ಏಕೋ, ಏನೋ ನಾನವ ರನ್ನು ಸಂತೈಸಲು ಹೋಗಲಿಲ್ಲ. ನೀನೇನೋ ಹೇಳುತ್ತೀ ನಿಜ. ಆದರೆ ನಾನು ತೀರಾ ಉದಾಸೀನನಾಗಿ ಬಿಟ್ಟೆನು. ನನ್ನ ಈ ವರ್ತನೆ ಅವರ ಜೀವ ನದಲ್ಲಿ ವಿರಾಗವನ್ನು ತಂದು ಕೊಟ್ಟಿತು. ಇದ್ದ ಒಬ್ಬ ಮಗ ಇಂಥ ಅವಿ ಧೇಯನಾದುದು ಅವರಿಗೆ ಮೋಹದ ಪರೆಯನ್ನು ಮರೆಯಾಗಿಸಿತೆಂದು. ನನ್ನ ಅನ್ನಿಸಿಕೆ ಇಲ್ಲವಾದರೆ...........

ಇವೇನು ಹನ್ನೆರಡು ವರುಷದ ಜೀವನ ಕಾದಂಬರಿಯನ್ನು ಬರೆ ಯಲಾರಂಭಿಸಿದೆ ಎಲ್ಲಾ?

ಪತ್ರಕ್ಕೆ ಇತಿಮಿತಿ ಇರಬೇಕೆಂದೆನಿಸಿದರೂ ಓದುವ ನಿನ್ನ ಹೃದಯ ವಿಶಾಲ ವಾಗಿರುವಾಗ ಬರೆದರೆ ತಪ್ಪೇನು?

ಪ್ರಿಯ ಪೂರ್ಣೆ, ಹೆಚ್ಚೇನು ಬರೆಯಲಿ? ಅಪ್ಪನು ಸನ್ಯಾಸಿಯಾದ ದಿನವೇ ನನಗೆ ತಂದೆ ಇರುವನೆಂಬುದನ್ನು ಮರೆತೆನು. ಮರೆಯಬೇಕಾಯಿತು. ಆದರೆ ಅವರು ನಿನ್ನ ಮಾವನೆಂದು ತಿಳಿದುಕೊಂಡಿದುದರಿಂದಲೇ ಅವರ ಆಶ್ರಮದಲ್ಲೂ ನೀನು ಅವರ ಸೊಸೆ, ನಿನಗೆ ಗೌರವ ಸಿಗಬೇಕೆಂದು ಆಶಿ ಸಿದೆ. ಇದೆಂತಹ ಹಕ್ಕು ನಿನ್ನದು ? ಅವರು ನನ್ನ ತಂದೆಯೂ ಅಲ್ಲ. ನಿನ್ನ ಮಾವನವರೂ ಅಲ್ಲ. ರಾಗದ್ವೇಷಗಳನ್ನು ತೊರೆದ ಸನ್ಯಾಸಿಗಳು. ಅಲ್ಲಿ ಯಾರಿಗೂ ಪುರಸ್ಕಾರವೂ ಇಲ್ಲ ತಿರಸ್ಕಾರವೂ ಇಲ್ಲ. ಅವರಿಗೆ ನೀನೇನು, ನಾನೇನು, ಅವರ ಮಗಳೇನು ಮತ್ತೊಬ್ಬ ಭಕ್ತನೇನು ಎಲ್ಲರೂ ಸಮರು. ನನ್ನ ತಂಗಿ ಅವರನ್ನು ಇನ್ನೂ ಅಪ್ಪನೆಂದು ತಿಳಿದುಕೊಂಡಿದ್ದರೆ ಆಕೆಯದು ಕುರುಡ ಮೋಹವಷ್ಟೆ.

ಅಪ್ಪ ಈಗ ಭಿಕ್ಷುಕ ನಾಥರು ಸಾಧಕರು ಅಂತೆಂದೇ ಅವರನ್ನು ಗೌರವಿ ಸೋಣ. ಹಾಗೆಯೇ ಪೂಜಿಸೋಣ. ಲೋಕದ ಜನರಿಗೆ ಅವರ ಮೇಲೆ ಎಷ್ಟು ಹಕ್ಕಿದಿಯೋ ಅಷ್ಟೇ ನನಗೂ ನಿನಗೂ ಇದೆ. ನೀನು ಅವರ ಸೊಸೆ ಯೆಂಬ ಅಧಿಕಾರವನ್ನು ಸನ್ಯಾಸಿಯ ಆಶ್ರಮದಲ್ಲಿ ಚಲಾಯಿಸುವದು ಒಳಿತಲ್ಲ.

ಇತಿ ನಿನ್ನವನೇ

# [ ೧೫ ]

ಡಿಯರ್, ಪ್ರೂಣೆ,

ನಿನಗೆ ವಯಸ್ಸು ಇಳಿಯುತ್ತಿದ್ದರೂ ತಂಟೆ, ಕ್ರೂರತನವಿನ್ನೂ ಹೋಗಿಲ್ಲ. ಮಲೆನಾಡ ಹುಡುಗಿಯ ನಾಗಕನ್ಯೆಯ ಕಥೆಯನ್ನು ಮುಗಿಸಿರುವೆನೆಂದು ನಾನು ಸಮಾಧಾನವಾಯಿತೆಂದು ತಿಳಿದುಕೊಳ್ಳುವದರೊಳಗೆ, ಡಾಕ್ಟರರ ಮನೆಯನ್ನು ನೆನಪಿಗೆ ತಂದೆಯಲ್ಲಾ! ಅಲ್ಲಾ ಇದ್ದಕಿದ್ದಂತೆ ಅದೇಕೆ ನೆನಪಾಯಿತು ? ೧೯೩೨ರಿಯ ವರುಷದ ನೆನಪು ೧೯೫೨ರಲ್ಲಿ ಏಕೆ? ಸಮಯ ಸಂದರ್ಭ ಒದಗದಿದ್ದಾಗ ಆಯಿತೇನೋ ?

ಆದರಾಗಲಿ, ನನ್ನದೇನು ತಪ್ಪು ಅದರಲ್ಲಿ? ಆ ಕಥೆಯನ್ನು ನನ್ನ ನೆನಪಿಗೆ ತರುವಾಗ ಆ ಚಿತ್ರದಲ್ಲಿ ಬರುವ ಪಾತ್ರಗಳಲ್ಲಿ ನಿನ್ನ ಚಿಕ್ಕಮ್ಮನೇ ಖಳನಾಯಿಕೆ ಎಂಬುದನ್ನು ಮರೆತಿಲ್ಲವಷ್ಟೇ?

ಸಾಕಿದ ನಾಯಿ ಕಾಲು ಕಚ್ಚುವಂತೆ ಔಷಧಿ ಕೊಟ್ಟು ಮಗಳನ್ನು ಉಳಿಸಿದ ಡಾಕ್ಟರ ಮನೆಗೆ ಮುಳುವಾಗಬೇಕೇ ಆ ನಿನ್ನ ಚಿಕ್ಕಮ್ಮ? ನನಗೇನೂ ಈ ಘಟನೆಯಿಂದ ಒಂದು ದೊಡ್ಡ ಪ್ರಯೋಜನವಾಯಿತು. ನನ್ನ ಜೀವನದಲ್ಲಿ ಇದೊಂದು ಆಕಸ್ಮಿಕವಾಗಿ ನಡೆದುಹೋಗದಿದ್ದರೆ ನಾನೆಲ್ಲಿ 'ರಾಯರ ಸಂಸಾರ' ಎಂಬ ನಾಟಕ ಬರೆದು ಬೆಂಗಳೂರಿನ ಪಟ್ಟಣಶೆಟ್ಟಿಹಾಲಿನಲ್ಲಿ ಪ್ರಯೋಗಿಸುತ್ತಿದ್ದೆ? ನಾಟಕ ಯಶಸ್ವಿಯಾಯಿತೋ, ನಾನು ನಾಟಕಕಾರನಾಗಿ ಉಳಿದೆನೋ. ಚಲಚ್ಚಿತ್ರಗಳನ್ನೂ ತಯಾರಿಸುವ ಹುರುಪು ತೋರಿದೆನೋ, ಆ ಕಥೆಯೇ ಬೇರೆ; ಆ ಉದ್ಯೋಗವೇ ಬೇರೆ. ಅದನ್ನೆಲ್ಲ ಪತ್ರದಲ್ಲಿಬರೆಯಲು ಸಾಧ್ಯವೇ? ಬರೆದರೆ ಒಳ್ಳೆಯ ಚಿತ್ರ ತಯಾರಿಕೆಗೆ ನಾನೇ ಒಂದು ಕಥಾವಸ್ತುವಾಗಬಹುದು. ಅದು ನನ್ನ ಇನ್ನೊಂದು ಮುಖ. ಕಲಾವಿದನಲ್ಲದಿದ್ದರೂ ಕಲಾಸೇವೆಗಾಗಿ ಹಾತೊರೆದು ಮುನ್ನುಗ್ಗಿ ಮೂತಿಯೊಡೆದುಕೊಂಡು ಈಗ ತೆಪ್ಪನೇ ಪತ್ರಿಕೋದ್ಯಮಿಯಾಗಿರುವೆನು.

ನಾನು ಆಡಿಸಿದ ನಾಟಕವನ್ನು ಮರೆತರೂ ನೀನು ಆಗ ನನ್ನೊಡನೆ ಆಡಿದ ಹಿಡಿಮಿಡಿಯ ನಾಟಕವನ್ನು ನಾನು ಮರೆಯಲಾರೆ. ರಾತ್ರಿ ನಾಟಕದ ರಿಹರ್ಸಲ್ಸನ್ನೆಲ್ಲ ಮುಗಿಸಿಕೊಂಡು ನಾನು ತಡವಾಗಿ ಮನೆಗೆಬರಬೇಕು. ನೀನು ಆರಿದ ಅನ್ನ ಮತ್ತು ಆರಲೆಂದು ತಟ್ಟೆಯಲ್ಲಿಟ್ಟು, ಸಾರನ್ನು ಬಾಯಿ ತೆರೆದಿಟ್ಟು ಮಲಗಿಕೊಂಡಿರಬೇಕು ಎಚ್ಚರವಾಗಿದ್ದರೂ. ಗಬಗಬನೆ ನಾನು ತಂಗಳನ್ನವನ್ನು ತಿನ್ನುತ್ತಿರುವುದನ್ನು ನೋಡಿಯೂ ಮುಚ್ಚಿದ ಕಣ್ಣಿನಲ್ಲೇ ಕಣ್ಣೀರು ಸುರಿಸುತ್ತಿದ್ದರೂ ನಿನ್ನನ್ನು ಸಮಾಧಾನಪಡಿಸದೆ ಸುಮ್ಮನೆ ನಾನು ಮೂಲೆಯ ಹಾಸಿಗೆಯೊಂದರಲ್ಲಿ ಮಲಗಿಕೊಳ್ಳುತ್ತಿದ್ದೆ. ಮುಂಜಾನೆ ಏರಕ್ರಾಪ್ಟದ ಸಿಳ್ಳು ಆದಾಗ, ಹೊತ್ತಾಯಿತೆಂದು ಅವಸರದಿಂದ ಎದ್ದು ಅರ್ಧಮುಖ ತೊಳೆದು, ಓಡಿಹೋಗುತ್ತಿದ್ದುದು ಪುನಃ ಸಂಜೆ ಐದು ಗಂಟೆಗೆ ಬರುವದೇ ತಡ, ಕೋನೇನ ಅಗ್ರಹಾರದಿಂದ ಬೆಂಗಳೂರಿಗೆ ನಾನು ಇರುವ ನಾಲ್ಕು ಮೈಲುಗಳನ್ನು ನಡೆದುಕೊಂಡು ಹೋಗಿ ಮಧ್ಯರಾತ್ರಿಯ ಹೊತ್ತಿಗೆ ಮತ್ತೆ ನಡೆದುಬರುವದು, ಇವೆಲ್ಲವನ್ನು ನೋಡಿ ನಿನಗೆ ಸಾಕಾಗಿರಬೇಕು. ನಾಟಕದಮನೆ ಹಾಳಾಗಲಿ ಎಂದು ಶಪಿಸುವದೇ ನಿನ್ನಕೆಲಸವಾಗಿತ್ತಲ್ಲವೇ? ನೀನು ಪತಿವ್ರತೆಯಲ್ಲವೇ? ನೀನು ಹೇಳಿದಂತೆಯೇ ಅದೇ ನನ್ನ ಕಲಾಸೇವೆಯ ಕೊನೆಯ ಅಂಕವಾಯಿತು.

ಈಗಲೂ ನಿನಗೆ ಭಯ, ಮತ್ತೆಲ್ಲಿ ನಾನು ನಾಟಕದ ಅಧ್ಯಾಯವನ್ನು ಆರಂಭಿಸುವೆನೋ ಎಂದು. ಇಲ್ಲಿ, ನಾನು ಬೇರೆ ನಾಟಕವನ್ನು ಕೈಕೊಳ್ಳಬೇಕಾಗಿಲ್ಲ. ನನ್ನ ನಾಟಕವೇ ದೊಡ್ಡನಾಟಕ. ನಾನೇ ಅದರ ಕಥಾನಾಯಕ. ನೀನಂತೂ ಸದಾ ಸಿಂಗರಿಸಿಕೊಂಡಿರುವ ಕಥಾನಾಯಿಕೆ. ಬೆಂಗಳೂರ ಹುಬ್ಬಳ್ಳಿಗಳ ಮಧ್ಯ ಇರುವ ದೂರವೆಲ್ಲವೂ, ಉದ್ದಗಲವೆಲ್ಲವೂ ನಮ್ಮ ರಂಗಭೂಮಿಯ ಉದ್ದಗಲವೇ. ಆದುದರಿಂದ ನಾನು ಬೇರೆ ನಾಟಕ ಬರೆದು ಆಡಿಸಬೇಕಿಲ್ಲ. ಅದ್ದರಿಂದ ಭಯಪಡಬೇಡ.

ನಾಟಕದ ಮಾತೆತ್ತಿದರೆ ಆ ನನ್ನ ಒಂದೇ ಒಂದು ನಾಟಕದಲ್ಲಿ ರಂಗಯ್ಯನ ಪಾತ್ರವನ್ನು ವಹಿಸಿದ ಕಿಡಿಗೇಡಿ ಕೃಷ್ಣನ ನೆನಪಾಗುವದು. ನನ್ನ ಜೊತೆಯಲ್ಲಿ ನನಗೇ ಬಹು ವಿಧೇಯನಾಗಿ ಶಿಷ್ಯನಂತೆ ಇರುತ್ತಿದ್ದನು. ಆದರೆ

ಅವನಾಗಲೇ ನನಗೆ ತಿಳಿಯದಂತೆಯೇ ನಿನ್ನ ಕಿವಿಯಲ್ಲಿ ಏನೇನೋ ಹೇಳಿ ಬಿಡುತ್ತಿದ್ದ. ನಾಟಕವನ್ನು ದಿಗ್ದರ್ಶಿಸುವ ನಾನು ಹೆಣ್ಣು ಪಾತ್ರದವರ ಜೊತೆಯಲ್ಲಿ ಮಾತನಾಡಲೇಬಾರದೇ? ಪಂಕಜಾಕ್ಷಿ, ಸೀತಾ ಇವರು ನನ್ನ ಕಡೆಗೆ ತಿರುಗಿ ನೋಡಿದರೆ ಸಾಕು. ಅದನ್ನೇ ಒಂದು ದೊಡ್ಡ ಕತೆಯಾಗಿ ಮಾಡಿ ನಿನ್ನೊಂದಿಗೆ ಹೇಳುತ್ತಿದ್ದನು. ಪಾಪ, ನಿನಗೆ ಬಾಯಿಗೆ ಬಂದ ಕೋಪವು ತುಟಿ ಮೀರುತ್ತಿರಲಿಲ್ಲ. ಹೇಗೂ ಮೂರು ತಿಂಗಳು ನಮ್ಮ ಸಂಸಾರವು ಮೌನವಾಗಿ ಸಾಗಿತು. ೧-೧-೧೯೪೭ರ ದಿವಸವೇ ನಾನು ಬರೆದ ನಾಟಕದ ಪ್ರಯೋಗವಾಯಿತು. ಅಲ್ಲಿಗೇ ಮುಗಿಯಿತು ನನ್ನ ನಾಟಕ ಪ್ರಪಂಚ. ಇದಾದ ಮೂರು ತಿಂಗಳಲ್ಲೇ ನನ್ನ ಜೀವನ ನಾಟಕದ ದೇಶಭ್ರಷ್ಟತೆಯ ಅಧ್ಯಾಯವು ಆರಂಭವಾಯಿತಲ್ಲವೇ?

ನೆನಪು ಮತ್ತೆ ಎಲ್ಲೆಲ್ಲೋ ಹಾರತೊಡಗಿದೆ. ನಿನಗೆ ಡಾಕ್ಟರ ಸಂಸಾರದ ಕಥೆಯನ್ನು ಹೇಳಬೇಕೆಂದು ಆರಂಭಿಸಿದ ನಾನು ನನ್ನ ನಾಟಕ ವನ್ನೇ ಹೇಳಲಾರಂಭಿಸಿದೆ. ಹೋಗಲಿ, ಆ ಬಗ್ಗೆ ಎಲ್ಲ ವಿವರವನ್ನು ಇನ್ನೊಂದು ಪತ್ರದಲ್ಲಿ ಬರೆಯುವೆನು.

ಮರೆತಿದ್ದೆ; ಪ್ರತಿ ಕಾಗದದಲ್ಲೂ ಬ್ರಹ್ಮಚಾರಿ ತೀರ್ಥಾನಂದರ ವಿಚಾರ ಕೇಳಬೇಕೆನ್ನುತ್ತಿದ್ದೆ. ಮನೆಗೆ ಮತ್ತೆ ಬಂದಿಲ್ಲವಲ್ಲ? ಬರುವುದೂ ಇಲ್ಲ. ನಾನವರಿಗೆ ಅವರ ಜೀವನದ ಉದ್ದಕ್ಕೂ ನೆನಪಿನಲ್ಲಿ ಉಳಿಯು ವಂಥಹ ಒಂದು ಪತ್ರವನ್ನು ಬರೆದಿರುವೆನು. ಆ ಪತ್ರವನ್ನು ಓದಿದ ಮೇಲೆ ಅವರು ಬೆಂಗಳೂರನ್ನು ಬಿಡಬೇಕು. ಆದರೆ ಇಷ್ಟಕ್ಕೆಲ್ಲ ಹೆದರುವವರೇ ಈ ಸನ್ಯಾಸಿಗಳು ಎಂಬ ಪ್ರಶ್ನೆ ಎದ್ದುನಿಲ್ಲುತ್ತದೆ. ಸದ್ಯ, ನಿನ್ನ ಮಾರುತಿ ಮುದ್ರೆ ಬೀಳುವದಕ್ಕೆ ಮೊದಲೇ ಆ ಸಾಧುಶ್ರೇಷ್ಠರು ಬದುಕಿಕೊಂಡರಲ್ಲವೇ?

ಅಲ್ಲಾ ಪೂರ್ಣಿ, ಅದೇಕೆ ಆ ಓದುವ ಹುಡುಗಿ ನಿನ್ನ ತಂಗಿ ನಳಿನಿಯ ಮದುವೆಯ ಬಗ್ಗೆ ಅಷ್ಟು ಅವಸರಪಡುತ್ತಿರುವೆ? ನಿನ್ನ ಅವಸರಕ್ಕೆ ಬೇರೆ ಅರ್ಥ ಮಾಡುತ್ತಿರಲಿಲ್ಲ.-ನೀನೇ, ನಾನು ಹೋದ ಸಾರೆ ಬೆಂಗಳೂರಿಗೆ ಬಂದಿ ದ್ದಾಗ ಕಿವಿಯಲ್ಲಿ "ಈ ಕಾಲದಲ್ಲಿ ಹೆತ್ತ ತಾಯಿಯಾದರೂ ನಂಬಬಾರದ್ರೀ ನೋಡ್ರೀ. ನಳಿನಿಗೆ ಎಲ್ಲೂ ಒಳ್ಳೆಯ ಗಂಡು ಸಿಕ್ಕದಿದ್ದರೆ, ನಮ್ಮ ಅಮ್ಮನ

ಮನಸ್ಸಿನಲ್ಲಿಏನಿದೆ ಗೊತ್ತೇ? ನಿಮಗೇ ಉಪಾಯ ಮಾಡಿಬಿಡತಾಳೆ. ಅದಕ್ಕೇ ನೀವು ಮೊನ್ನೆ ಊರಿಗೆ ಹೋಗಿದ್ದಾಗ ಹೊಸ ಹೊಸ ತರಹದ ಉಪಚಾರ. ನೀವು ನಳಿನಿಯನ್ನ ಹಾಸ್ಯ ಮಾಡುತ್ತಾ ಇದ್ದರೆ, ಅಮ್ಮ ಒಳಗೊಳಗೆ ನಗುತ್ತಾ ಇರತಾ ಇದ್ದಳು. ನೀವೇನಪ್ಪಾ ಗಂಡಸರು ಹೇಗೆ ಮನಸ್ಸು ತಿರುಗತದೋ ಹೇಳಲಿಕ್ಕೇ ಬರೋಲ್ಲ. ನೀವಂತೂ ಮೆಲ್ಲಗೆ ಮಾತಾಡುವವರ ಮಡಿಲ ಕೂಸು" ಎಂದು ಹೇಚಾಡಿ ನನ್ನ ಹೊಟ್ಟೆಯ ಮೇಲೆ ಉರುಳಾಡಿದ ದೃಶ್ಯವೂ ನೆನಪಿಗೆ ಬಂದಿತು. ನೆನಸಿಕೊಂಡಂತೆಲ್ಲಾ ನನಗೆ ನಗು ಒದತ್ತಿದೆ ನಿನ್ನ ತಿಳಿಗೇಡಿತನವನ್ನು ಕಂಡು ನಕ್ಕುಬಿಡಲೆ? ಸ್ತ್ರೀಯು ಸ್ವಾರ್ಥದ ಪ್ರೇಮದ ಬಗ್ಗೆ ತನ್ನ ಹೆತ್ತ ತಾಯನ್ನೂ ನಂಬಳು. ತನ್ನ ಗಂಡನನ್ನೂ ಸಂದೇಹಿಸುವಳು. ತನ್ನ ಅರ್ಧ ದೇಹವನ್ನ ಬೇಕಾದರೂ ಕೊಯ್ದು ಕೊಡಬಲ್ಲ ಸ್ತ್ರೀ ಮಾತೆಯಾಗಿ ತನ್ನ ಜೀವನವನ್ನ ಬಲಿದಾನವಾಗಿ ಕೊಡಬಲ್ಲ ಸ್ತ್ರೀ ತನ್ನ ಪ್ರೇಮಸಾಮ್ರಾಜ್ಯದಲ್ಲಿ ತಾನು ರಾಣಿಯಾಗಿರುವ ತನ್ನ ಸೀಮೆಯಲ್ಲಿ ಅನ್ಯರ ನೆರಳು ಬಿದ್ದರೂ ಸಹಿಸಳು. ಇಂತಹ ಶಕ್ತಿಯಿಂದಲೇ ಸ್ತ್ರೀ ಯುಗಶಕ್ತಿಯಾಗಿ ಆರ್ಯಭೂಮಿಯಲ್ಲಿ ಬಾಳಿ ಬೆಳಗಿದಳು. ಇಂಥಹ ಮೊತ್ತ ಉದಾಹರಣೆ ಈಗೇಕೆ? ಸವತಿ ಬರುವ ಮೊದಲೇ ಸವತಿ ಮಾತ್ಸರ್ಯವನ್ನು ತೋರಿಸುವ ಈ ನನ್ನ ಮಹಾಸತಿಗೆ ಹಿಂದೊಮ್ಮೆ ಇಂತಹದೇ ಒಂದು ಪ್ರಸಂಗ ಬಂದಿರಲಿಲ್ಲವೇ? ನಿಮ್ಮ ಚಿಕ್ಕಮ್ಮನ ಮಗಳೊಬ್ಬಳು. ಇನ್ನು ಮುಂದೆ ನಿನಗೆ ಗಂಡು ಮಕ್ಕಳೇ ಆಗುವದಿಲ್ಲವೆಂದು, ನಿನ್ನ ಮದುವೆಯಾದ ಎರಡು ವರ್ಷದಲ್ಲಿ ಊಹಿಸಿ, ಆ ಹುಡುಗಿಯನ್ನು ನನಗೆ ಕಟ್ಟಬೇಕೆಂದಿದ್ದುದೂ ನಮ್ಮ ತಾತ ಮೂರು ಮದುವೆ ಮಾಡಿಕೊಂಡಿದ್ದನಂತೆ. ಅವರಿಗೆ ಹದಿನೆಂಟು ಮಕ್ಕಳಂತೆ ಅಂತಹನ ಹೆಸರನ್ನುಳಿಸಲು ನಾನು ಇನ್ನೊಂದು ಮದುವೆಯಾಗಬಾರದೇ ಎಂಬುದೇ ನನ್ನ ತಂದೆಯ ಬಂಧುಗಳ ಮತ್ತು ಸೋದರತ್ತೆಯ ಉಪದೇಶವಾಗಿತ್ತು. ಆ ಹುಡುಗಿಯೂ ಸಹ ನಿನಗೆ ಸವತಿಯಾಗಿ ಬರಲು ಹೆದರಲಿಲ್ಲ; ಹಿಂದೆಗೆಯಲಿಲ್ಲ. ಅಕ್ಕನೆಂಬ ಸಲಿಗೆಯಿಂದಿರಬಹುದು. ನಿನ್ನನ್ನು ಆಗೆಂತು ಪರೀಕ್ಷಿಸಿದೆನೆಂಬುದು ಜ್ಞಾಪಕಕ್ಕೆ ಬಂದಿತೇ?

ಆ ಹುಡುಗಿಯನ್ನು ಮದುವೆಯಾಗಲೇ ಎಂದು ನಿನ್ನನ್ನೂ ಕೇಳಿದೆನು. ಆಗಿನ್ನೂ ಗಂಡಸುತನದ ಗಂಟಲೂ ಗಂಡಸುತನದ ಹೆಂಗುಸುತನವೂ ನಿನಗೆ ಬಂದಿರಲಿಲ್ಲ. ಆದರೂ ಆಗ ನೀನು ಕೊಟ್ಟ ಉತ್ತರವನ್ನು ಮರೆಯುವಂತಿಲ್ಲ. ಅದೆಷ್ಟು ಉಪಮಾಬದ್ಧವಾಗಿದ್ದಿತು ನಿನ್ನ ಉತ್ತರ? "ತಿನ್ನಲೇಬೇಕೆಂಬ ಆಸೆಯಿಂದ ಎರಡು ಹೋಳಿಗೆಗಳನ್ನು ಎಲೆಯ ಮೇಲೆ ಹಾಕಿಕೊಂಡಿರುವಾಗ ಅದೇ ಎಲೆಯ ಬದಿಗೆ ಮತ್ತೊಬ್ಬರು ಬಂದಾಗ ಆ ಎಡೆಗೆ ಒಂದು ಹೋಳಿಗೆಯನ್ನು ಕೊಡದೇ ವಿಧಿಯೇ ಇಲ್ಲ. ಇದರಲ್ಲಿ ಮನಸ್ಸಿನ ಪ್ರಶ್ನೆ ಏನು ಬಂದಿತು? ನೀವು ಇಷ್ಟೊಂದು ಪುರಾಣ ಓದಿದವರು. ನಿಮಗೆ ಯಾವ ಸ್ತ್ರೀಯೂ ತನ್ನ ಗಂಡನನ್ನು ಇತರರಿಗೆ ಹಂಚಿಕೊಡಲು ಸಿದ್ಧವಿಲ್ಲವೆಂಬ ಸಿದ್ಧಾಂತವನ್ನು ತಿಳಿದುಕೊಂಡಿಲ್ಲವೇ? " ಎಂದು ಮೆಲ್ಲ ಮೆಲ್ಲನೆ ದಬಾಯಿಸೇ ಬಿಟ್ಟೆ. ನಾನು ನಗುತ್ತಲೇ ಪಾರಾದೆನು. ಹೇಗೋ ಆ ಹುಡುಗಿಯ ಕಂಕಣಪ್ರಾಪ್ತಿ ಬೇರೆಯವರಿಗೆ ಆಯಿತೆನ್ನು. ಇಲ್ಲವಾದರೆ ನಾನು ನಿಮ್ಮಿಬ್ಬರಿಗೂ ಪತ್ರ ಬರೆದೂ ಬರೆದೂ ಒಳಜಗಳಗಳನ್ನು ಸಮಾಧಾನ ಮಾಡುವದರಲ್ಲೇ ನನ್ನ ಸಮಯವೆಲ್ಲ ಕಳೆಯಬೇಕಾಗಿತ್ತು.

ಆಗಿನ ನನ್ನ ಇಪ್ಪತ್ತೆರಡು ವರ್ಷದ ಪ್ರಾಯದಲ್ಲೇ ಮತ್ತೊಬ್ಬ ಹೆಂಡತಿಗೆ ಹೆದರಿಕೊಂಡ ನಾನು ಈಗ ವಾನಪ್ರಸ್ಥಾಶ್ರಮದತ್ತ ಮುಖಮಾಡುತ್ತಿರುವಾಗ ಇನ್ನೊಂದು ಮದುವೆಗೆ ಒಪ್ಪುವೆನೆ? ಹುಚ್ಚೀ, ನಿನ್ನ ತಾಯಿಯನ್ನು ದೂರಬೇಡ. ನಳಿನಿಗೊಬ್ಬ ಗಂಡನನ್ನು ನಾನೇ ಹುಡುಕುತ್ತಿರುವೆನು. ಆದುದರಿಂದ ಅವಳ ಮದುವೆಗೆ ಅವಸರ ಮಾಡಬೇಡ. ತಿಳಿಯಿತೋ?

ಈ ಪತ್ರ ಎಲ್ಲಿಯಾದರೂ ನಳಿನಿಗೆ ಸಿಕ್ಕೀತು, ಅವಳು ಕಳ್ಳಿ. ಅಂದು ಹಿಂದೊಮ್ಮೆ ನಿನಗೆ ಬರೆದಿದ್ದ ಪತ್ರವು ಆಕೆಯ ಆಲಜಿಬ್ರಾ ರಫ್ ನೋಟ ಪುಸ್ತಕದಲ್ಲಿ ಇದ್ದುದನ್ನು ನಾನು ನೋಡಿದ್ದೇನೆ. ಎಚ್ಚರ. ನೀನುಪತ್ರಬರೆಯುವಾಗ ಬಹು ತಿಣುಕುವಂತೆ ಕಾಣುತ್ತದೆ. ಏಕೆಂದರೆ ಅಕ್ಷರಗಳನ್ನು ಸುತ್ತಿ ಸುತ್ತಿ ಬರೆದಿರುವೆ. ಕೂಡಲೇ ಪತ್ರ ಬರೆ.

**ಇತಿ ನಿನ್ನವನೇ.**

[೧೬]

ಶ್ರೀಮತಿ,

ಪತಿವ್ರತೇ,

ಈ ಸಲ ಬಲು ಬೇಗ ಉತ್ತರವನ್ನು ಬರೆದು ಬಿಟ್ಟೆಯಲ್ಲ? ಒಳ್ಳೆಯದು. ನಾನು ಪತ್ರಕ್ಕಾಗಿ ಪೇಚಾಡುವುದನ್ನು ನೋಡಿ ನಿನಗೆ ಬಲ ಕೆಟ್ಟೆನಿಸಿರಬಹುದಲ್ಲವೆ? ಮರೆಯುದೇ ರಾಯರ ನಾಟಕದ ಬಗ್ಗೆ ಬರೆಯು ಬೇಕೆಂದು ಬೇರೆ ಬರೆದುಕೊಂಡಿರುವೆ. ಏಕೆ, ಸವಿ ಹತ್ತಿತೆ ನೆನಪಿನ ಬುತ್ತಿ? ನಾಲಿಗೆಗೆ ರುಚಿ ತಗುಲಿತೇನು ನನ್ನ ಮಹಾಭಾರತ? ಇಲ್ಲ ಇಲ್ಲ, ನಾನು ಮರೆಯುತ್ತಿರುವದನ್ನು ನೀನು ನೆನಪು ಮಾಡುತ್ತಿರುವುದರಲ್ಲಿ ಏನೋ ಕುಚೋದ್ಯತನವಿದೆ. ನಿನಗೆ ನನ್ನ ಗುಟ್ಟೆಲ್ಲ ಗೊತ್ತು. ನಾನು ಬಾಯಲ್ಲಿ ಸುಳ್ಳು ಹೇಳಿದರೂ (ಒಮ್ಮೊಮ್ಮೆ ನಿನ್ನ ಮುಂದೆ ಮಾತ್ರ) ಬರೆಯುವಾಗ ಸುಳ್ಳುಬರೆಯೆನು. ಏನಾಗುವುದೆಂಬುವುದರ ಪರಿಣಾಮವನ್ನು ಲೆಕ್ಕಿಸದೆ ಬರೆದು ಬಿಡುವೆನೆಂದು ತಿಳಿದುಕೊಂಡಿರುವಿ. ಪ್ರಸಂಗಗಳನ್ನು ನೆನಪಿಗೆ ತಂದುಕೊಟ್ಟು ಅವನ್ನು ಪತ್ರಗಳಿಗೆ ಈಡು ಮಾಡುತ್ತಿರುವಿ.

ಅಂದು ೧೯೪೬ನೆಯ ಸಪ್ಟೆಂಬರು ತಿಂಗಳ ರಾತ್ರಿಯೊಂದರಲ್ಲಿ ಮಧ್ಯ ರಾತ್ರಿಯ ವರೆಗೆ ಮೇಲುಸಿರು ಬಿಡುತ್ತಾ ಏನು ಹೇಳಿದೆನೋ ಅವೆಲ್ಲವೂ ನಿಜ. ನೀನು ನನ್ನೆದೆಯನ್ನು ಮುಟ್ಟಿನೋಡಿದ್ದರೆ ಆಗ ತಿಳಿಯುತ್ತಿತ್ತು ನನ್ನ ಎದೆ ಎಷ್ಟರ ಮಟ್ಟಿಗೆ ಡವ್ ಡವ್‌ಯೆಂದು ಹೊಡೆದುಕೊಳ್ಳುತ್ತಿತ್ತೆಂಬುದು. ಆ ಎದೆಯ ಬಡಿತವೇ ನನಗೊಂದು ರುದ್ರಾಂತದ ನಾಟಕದ ಕಥಾವಸ್ತು ವನ್ನು ದೊರಕಿಸಿಕೊಟ್ಟಿತಲ್ಲವೆ? ಇಲ್ಲವಾದರೆ ನನ್ನ ಜೀವನದ ದ್ವಾದಶ ವೇಷದಲ್ಲಿ ನಾಟಕಕಾರನ ವೇಷವೂ ಸಿಕ್ಕದೇ— ಹನ್ನೊಂದು ಅವತಾರಗ ಳಷ್ಟೇ ಆಗಿಬಿಡುತ್ತಿತ್ತು.

ನಾನು "ರಾಯರ ನಾಟಕ"ವನ್ನು, ಮರೆಯುಬಹುದು. ರಾಯರನ್ನು

ಮರೆಯಲು ಯತ್ನಿಸುವೆನು. ಆದರೆ ಆವರ ಸಂಸಾರದಲ್ಲಿ ಅನವಶ್ಯಕವಾಗಿ ಬಂದ ನಿಮ್ಮ ಚಿಕ್ಕಮ್ಮನನ್ನು ಮಾತ್ರ ಮರೆಯಲಾರೆ. ಈ ಖಳನಾಯಕಿಯನ್ನು ಮೇಲಿಂದ ಮೇಲೆ ನಿನ್ನ ಚಿಕ್ಕಮ್ಮನೆಂದು ಬರೆಯುವುದು ಚುಚ್ಚುಮಾತಿಗಲ್ಲ. ನಿನಗೆಷ್ಟು ಸಂಬಂಧವೋ ನನಗೂ ಈಕೆ ಸೋದರಿಯಾಗಬೇಕು. ನನ್ನ ದೊಡ್ಡಪ್ಪನ ಮಗಳಲ್ಲವೇ ಈಕೆ? ನಿನ್ನ ತಾಯಿಗೆ ಈಕೆ ತಂಗಿಯಾದರೆ, ನನಗೂ ಅಕ್ಕನಾದಂತಲ್ಲವೆ? ನನಗೆ ಅಕ್ಕಳಾದರೆ ನನ್ನ ಲೇಖನಿಗೇನು ಸಂಬಂಧ? ಈ ಮಹಾರಾಯಿತಿ ತನ್ನ ಇಪ್ಪತ್ತನೆಯ ವರುಷದಲ್ಲೇ ಗಂಡನನ್ನು ಕಳೆದುಕೊಂಡಳು. ಈಕೆಯು ಗಂಡ ಸತ್ತಾಗ ಎಲ್ಲಿಯಾದರೂ ಬಾವಿಗೆ ಹಾರಿಕೊಂಡು ಪ್ರಾಣಬಿಟ್ಟಳೆಂದು ಭಯ ಬಂದುದು ನನಗೆ ಚೆನ್ನಾಗಿ ನೆನಪಿದೆ. ನಾನಿನ್ನೂ ಆಗ ಮೈಸೂರಿನ ಮಿಡಲ್ ಸ್ಕೂಲಿನಲ್ಲಿ ಓದುತ್ತಿದ್ದೆನು.

ಅಕ್ಕನೆಂದು ನನ್ನಿಂದ ಕರೆಯಿಸಿಕೊಳ್ಳುವ ವರೆಗೂ ನಾನಾಕೆಯನ್ನು ಕಂಡರೆ ಬಹಳ ಪ್ರೀತಿಸುತ್ತಿದ್ದೆ. ಗಂಡನನ್ನು ನೆನಸಿಕೊಂಡು ಮುಖದ ಮೇಲೆ ಸೆರಗು ಮುಚ್ಚಿಕೊಂಡು ಅಳುತ್ತಿದ್ದಾಗ ನಾನು ಆಕೆಯಿದ್ದ ಕೋಣೆಗೆ ಹೋಗಿ "ಅಳಬೇಡಕ್ಕ ಸತ್ತವರು ಅತ್ತರೆ ಬರುವರೆ'' ಎಂದು ಹೇಳಿ ಹೇಳಿ ಬಿಕ್ಕಿ ಬಿಕ್ಕಿ ಅಳುತ್ತಿದ್ದೆನು. ಅವಳು ಕೊರಗಿ ಸೊರಗಿ ಮಲಗಿಕೊಂಡಾಗ ಆಕೆಯ ಪಾದಗಳನ್ನು ಒತ್ತುತ್ತಾ ಕುಳಿತುಕೊಳ್ಳುತ್ತಿದ್ದೆನು. ಎಷ್ಟೋಸಲ ಆಕೆಯ ಮಲಗುವ ಕೋಣೆಯಲ್ಲಿಯೇ ಕುಳಿತು ಮಲಗಿ ನನ್ನ ಓದನ್ನು ಮುಗಿಸುತ್ತಿದ್ದೆನು. ಇಷ್ಟೆಲ್ಲವೂ ನಡೆದುದು ಆರು ತಿಂಗಳು ಮಾತ್ರ. ಅಷ್ಟರಲ್ಲಿಯೇ ಗಂಡನ ಆಸ್ತಿಯ ಹಕ್ಕು ಬಂದಿತು. ನನ್ನ ಸೋದರತ್ತೆಯ ಮಗ ಈಕೆಯ ದತ್ತಕ ಪುತ್ರನಾದನು. ಎದೆಯೆತ್ತರದ ಮಗ ದೊರಕಿದ ಮೇಲೆ ಸತ್ತ ಗಂಡನನ್ನು ನೆನೆಸಿಕೊಂಡು ಅಳುವುದು ಕಡಿಮೆಯಾಗುವುದೆಂದು ಭಾವಿಸಿದ್ದೆನು. ಆದರೆ ವರುಷ ಮುಗಿಯುವುದರಲ್ಲಿಯೇ ಆದ ಕತೆಯೇ ಬೇರೆ. ಎಲ್ಲವನ್ನೂ ಬಿಚ್ಚಿ ಬಿಚ್ಚಿ ಹೇಳ ಹೊರಟರೆ ನನ್ನ ಲೇಖನಿಯ ಹಠ ಎಲ್ಲಿಗೆ ಹೋಗಿ ಮುಟ್ಟುವುದೋ? ಈ ಅಕ್ಕನ ಕತೆ ಇಷ್ಟಕ್ಕೆ ಸಾಕು. ಇನ್ನು ಮುಂದಿನ ಕತೆಯಲ್ಲಿ ಆಕೆ ನನ್ನ ಅಕ್ಕನಾಗಿ ಉಳಿದಿಲ್ಲ. ನನ್ನ ನಾಟಕದ ಖಳನಾಯಕಿಯಾಗಿ ಉಳಿದಿರುವಳು.

ಡಾಕ್ಟರರ ಪರಿಚಯವಾದ ನಂತರ ನಾನು ಅವರ ಮನೆಗೆ ಹೋಗಿ ಬರಲು ಆರಂಭಿಸಿದ ಆರು ತಿಂಗಳ ನಂತರ ನಾನು ಆ ನಿಮ್ಮ ಚಿಕ್ಕಮ್ಮನನ್ನು ದಾರಿಯಲ್ಲಿ ಕಂಡೆನು. ಕಂಕುಳಲ್ಲಿ ಐದಾರು ವರುಷದ ಮಗುವಿದ್ದಿತು. ಇದಾರ ಮಗುವೋ ತಿಳಿಯದು. ಅಲ್ಲಿಗೆ ಆರು ವರುಷವಾಗಿತ್ತು ನಾನು ಶಂಕರಮ್ಮನನ್ನು ನೋಡಿ. ಆದರೆ ಅವಳ ಇತಿಹಾಸ ಮಾತ್ರ ನನ್ನ ಕಿವಿಗೆ ಬೇಡವೆಂದರೂ ಬೀಳುತ್ತಲೇ ಇದ್ದಿತು. ಅದೇ ಊರಿನಲ್ಲಿ ನಾವಿಬ್ಬರೂ ಇದ್ದರೂ ನಾನೂ ಆಕೆ ವಾಸಿಸುತ್ತಲಿದ್ದ ಬೀದಿಯ ಹತ್ತಿರವೇ ಹೋಗುತ್ತಿರಲೇ ಇಲ್ಲ. ಅಂದು ಆಸ್ಪತ್ರೆಗೆ ಹೋಗುತ್ತಿದ್ದಾಕೆ ನನ್ನ ಮುಖನೋಡಿದ ಕೂಡಲೇ ಮಾತನಾಡಿಸಿದಳು. ಸಿಟ್ಟು ಬರಲಿಲ್ಲ. ಮುಖ ತಪ್ಪಿಸಿ ಮುಂದಕ್ಕೆ ಹೋಗಬೇಕಾಗಿದ್ದಿತು. ಆದರೆ, ಮಾತು ಈ ಕಂಕುಳಲ್ಲಿದ್ದ ಕೂಸಿನ ಖಾಯಿಲೆ ವಿಚಾರ! ನನಗೂ ಡಾಕ್ಟರ್ ಶಾಮರಾವ್ ಇವರಿಗೂ ಇರುವ ಸ್ನೇಹದಿಂದ ಅವರಲ್ಲಿಗೆ ಕರೆದುಕೊಂಡು ಹೋಗಬೇಕೆಂದು ಅಂಗಲಾಚಿ ಬೇಡಿಕೊಂಡಳು. ಹೃದಯ ಕರಗಿತು. ಆಕೆಯ ಕುಟಿಲವರ್ತನೆ ನೆನಪಿಗೆ ಬಂದರೂ ಮೇಲುಸಿರು ಬಿಡುವ ಮಗುವಿನ ಬಗ್ಗೆ ಕರುಣೆ ಉಂಟಾಯಿತು. ಒಂದು ಪರಿಚಯದ ಚೀಟಿ ಬರೆದು ಕೊಟ್ಟೆ. ಅದುವೇ ಡಾಕ್ಟರ್ ಸಂಸಾರವನ್ನು ಸುಡುವ ಬೆಂಕಿಯ ಕಿಡಿಯಾಗಿ ಪರಿಣಮಿಸಿತು.

ಪೂರ್ಣೀ, ಓದುಬರಹ ಕಲಿತವರಿಗೆ ಆ ನಾಗರಿಕತೆಯ ಮಾತುಕತೆ, ವೈಯ್ಯಾರ, ಬಿಂಕ, ಬಿನ್ನಾಣ ಇವು ನಾನು ಆಕೆಯನ್ನು ಅಕ್ಕನಾಗಿಯೇ ನೋಡುತ್ತಿದ್ದುದರಿಂದ ತಿಳಿಯಲಿಲ್ಲ. ಡಾಕ್ಟರ್ ದೊಡ್ಡ ಹೆಂಡತಿ ಚಂಪ: ಚಿಕ್ಕ ಹೆಂಡತಿ ಮಂಜುಳ. ಇವರಿಬ್ಬರೂ ಶಂಕರಮ್ಮ ಸ್ನೇಹಿತಳಾದರು. ನಾನು ಆಕೆಯನ್ನು ಅಕ್ಕನೆಂದು ಹೇಳಿಕೊಳ್ಳುವ ಮೊದಲೇ ಪರಿಚಯವನ್ನು ತಾನೇಮಾಡಿಕೊಂಡ ಈ ಮಹಾರಾಯಿತಿ ಡಾಕ್ಟರ್ ಮನೆಯಲ್ಲಿ ಮನೆಯವಳಾದಳು. ನನಗೆ ಈಕೆಯ ಇಷ್ಟೊಂದು ಸಲಿಗೆ, ಕೆಲಸವಿಲ್ಲದ ಕೆಲಸ ಸರಿಬೀಳಲಿಲ್ಲ. ಯಾರಿಗೆ ಎಚ್ಚರ ಕೊಡಲಿ, ಹೇಗೆಎಚ್ಚರಿಸಲಿ ಎಂದು ನಿರ್ಧರಿಸುವದರೊಳಗೆ ಶಂಕರಮ್ಮನ ನಾಟಕವು ಆರಂಭವಾಗಿ ಅರ್ಧ ಮುಗಿದಿತ್ತು.

ಡಾಕ್ಟರರ ಮೊದಲ ಹೆಂಡತಿ ಚಂಪ. ಆಕೆಗೆ ಬಹು ಲೋಕಾನುಭವ. ರಾಯರ ಐವತ್ತಕ್ಕೆ ಮೀರಿದ ವಯಸ್ಸಿಗೆ ತನ್ನ ಇಪ್ಪತ್ತೈದು ವರುಷಗಳನ್ನು ಹೊಂದಿಸಿಕೊಂಡು ಹೋಗುವಷ್ಟು ಬುದ್ಧಿವಂತೆ. ದೂರದೃಷ್ಟಿಯುಳ್ಳವಳು. ತನ್ನ ಮದುವೆಯಾದ ಮೇಲೂ ಡಾಕ್ಟರರು ತನ್ನ ಇಳಿವಯಸ್ಸಿನಲ್ಲಿ ಆ ಎಳೆ ಹುಡುಗಿ ಮಂಜುಳೆಯನ್ನು ವಂಶಾಭಿವೃದ್ಧಿಗಾಗಿ ಮದುವೆ ಮಾಡಿಕೊಂಡರು. ಒದಗಿದ ಅಸಮಾಧಾನವನ್ನು ನುಂಗಿಕೊಂಡು ತನ್ನ ಪಾಲಿಗೆ ಸಿಕ್ಕಿದುದನ್ನೇ ಅಮೃತವೆಂದು ನೆನೆದು ಅನುಭವಿಸುವುದನ್ನು ಚಂಪ ಕಲಿತಿದ್ದಳು. ತನ ಸುಖಕ್ಕಿಂತ ಸುಳಿಬಾಳೆಯ ಎಲೆಯಂತೆ ಥಳಥಳ ಮಿನುಗುತ್ತಿರುವ ಮಂಜುಳೆಯ ಸುಖದ ಬಗ್ಗೆ ಬಲು ಸಹಾನುಭೂತಿ ಇತ್ತು. ಮತ್ತು ಅಲ್ಪಸ್ವಲ್ಪ ಭಯವೂ ಇದ್ದಿತು. ಆದರೆ ಅದನ್ನು ಹೊರಗೆಡಹದಂತೆ ಮಂಜುಳೆಯನ್ನು ದುಃಖದಿಂದ ತಪ್ಪಿಸಲು ಯುಕ್ತಿಸುತ್ತಿದ್ದ ಚಂಪುವ ಮೇಲೆ ಶಂಕರಮ್ಮನ ಪ್ರಭಾವವು ನಿರುಪಯೋಗವಾಯಿತು. ಆದರೆ ಮಂಜುಳೆಗೆ ಕ್ರಮಕ್ರಮವಾಗಿ ಶಂಕರಮ್ಮನ ಸಿಹಿಮಾತಿನ ಸವಿಹತ್ತಿತು. ಅವಳು ಹೇಳುವ ಕತೆಗಳಲ್ಲಿ ಕಾಣಬಾರದ ಕನಸು ಕಂಡು ಮಂಜುಳೆಯ ಬಾಯಿಯಲ್ಲಿ ನೀರೂರಿದುದು ನನಗೆ ಗೊತ್ತಾದುದು, ನಾನು ಮತ್ತು ರಾಯರು, ಚಂಪ ಮತ್ತು ಮಂಜುಳ ಇವರೆಲ್ಲರೂ ಕೂಡಿಕೊಂಡು ಶಾಂತಾಆಪ್ಟೆ ನಟಿಸಿದ್ದ "ಮೊಹಬತ್" ಚಿತ್ರವನ್ನು ನೋಡಿದ ನಡುರಾತ್ರಿಯೊಂದರಲ್ಲಿ. ಡಾಕ್ಟರ್ ಒಂದು ಪಕ್ಕಕ್ಕೆ ನಾನು ಮತ್ತೊಂದು ಪಕ್ಕಕ್ಕೆ ಮಂಜುಳೆ ಕುಳಿತುಕೊಂಡು ಸಿನೇಮಾ ನೋಡುವುದು, ಮಧ್ಯ ಊರಿನಿಂದ ಅಲ್ಲಿಗೆ ಹೋದಾಗಲೆಲ್ಲಾ ಸ್ವಾಭಾವಿಕವೇ ಆಗಿದ್ದಿತು. ಇದೇನೂ ಹೊಸದಲ್ಲ. ಆದರೆ ಅಂದು ರಾತ್ರಿ ಮಾತ್ರ ಮಂಜುಳೆ ತಾನು ಕುಳಿತಿರುವುದು ನನ್ನ ಪಕ್ಕದಲ್ಲೆಂಬುದನ್ನು ಮರೆತಳು. ರಾಯರಿಗೆ ತಿಳಿಯದಂತೆಯೆ, ನನಗೆ ತಿಳಿಯದಂತೆಯೇ, ಶಾಂತಾಆಪ್ಟೆಯು ಅಭಿನಯಿಸಿದ 'ಮೊಹಬತ್'ನ್ನು ತಾನೂ ಅಭಿನಯಿಸಿದಳು. ನಿಜವಾಗಿಯು ಆಕೆಗೂ ನನಗೂ ಇದ್ದ ಸಲುಗೆಯಲ್ಲಿ,ಒಬ್ಬಳೇ ಕುಳಿತು ಚಂಪ ಅಡಿಗೆ ಮನೆಯಲ್ಲಿದ್ದರೂ ತಾನು ನಡುಮನೆಯಲ್ಲಿ ಕುಳಿತು, ತಾಸುಗಟ್ಟಲೆ ನನ್ನೊಂದಿಗೆ ಫಿಂಗರ್‌ಬಿಲಿಯರ್ಡ್ಸ್ ಆಡುತ್ತಿದ್ದಳು. ನಾನು ಸಾಕು ಎನ್ನುವರೆಗೂ ರಾಯರಿಗೆ ಬೇಕಾಗಲಿ ಬೇಡದಿರಲಿ, ವೀಣೆಯನ್ನು ಬಾರಿಸುತ್ತಿದ್ದಳು. ನಾನು ಊರಿನಿಂದ

ಅವರಲ್ಲಿಗೆ ಹೋಗುವುದು ಬಹಳ ದಿನವಾದರೆ ಸಣ್ಣಮಗುವಿನಂತೆ ಏಕೆ ಬರ ಲಿಲ್ಲವೆಂದು ಜಗಳವಾಡುತ್ತಿದ್ದಳು. ಇದೆಲ್ಲಕ್ಕೂ ನಿನ್ನನ್ನೇ ನಾನು ದೂರು ವುದು. ಇವೆಲ್ಲ ನನ್ನ ಮತ್ತು ಡಾಕ್ಟರ್ ಸ್ನೇಹದಲ್ಲಿ ಒಂದು ವರುಷಕ್ಕಿಂತ ಹೆಚ್ಚಾಗಿ ಬಾಳಿದ ಸ್ನೇಹದ ಜತೆಯಲ್ಲಿ ಬೆಳೆದು ಬಂದ ನಿತ್ಯಕ್ರಮಗಳೇ ಆಗಿ ದ್ದವೆಂಬುದನ್ನು ನೀನು ಬಲ್ಲೆಯಷ್ಟೆ? ಆಗ ನೀನಿದ್ದುದು ಗುಂಡ್ಲುಪೇಟೆ ಯಲ್ಲಿ. ನಾನು ಮೈಸೂರಿಗೆ ಹೋಗಿ ಬಂದ ಕೂಡಲೇ ಡಾಕ್ಟರ್ ಮನೆಯ ಊಟ ಮಂಜುಳೆಯ ಸಂಗೀತ ಚಂಪಳ ಸಂಸಾರದ ವ್ಯವಹಾರ ನಾವು ನೋಡಿದ ಸಿನೇಮ ಇವೆಲ್ಲವುಗಳನ್ನೂ ನಿನಗೆ ಹೇಳಿ ಮುಗಿಸದಿದ್ದರೆ ನೀನು ಸುಮ್ಮನಿರುತ್ತಿರಲಿಲ್ಲ. ಕೊನೆಗೊಮ್ಮೆ ಮಂಜುಳೆಯ ನವಯೌವನ ರಾಯರ ಮುದುರುವ ವೃದ್ಧಾಪ್ಯ, ಇವುಗಳನ್ನು ನೆನೆದುಕೊಂಡು 'ಅಯ್ಯೋಪಾಪ' ಎಂದು ಹೇಳಿ ಅನಂತರ ನಾನು ತಂದ ಹಣ್ಣಿನ ಬುಟ್ಟಿಗೆ ನೀನು ಕೈ ಹಾಕುತ್ತಿದ್ದೆ. ಕೊಂಕುನುಡಿಯುವುದರಲ್ಲಿ ಬಹು ಹೆಸರಾದ ನೀನು ಅದೇಕೋ ಈ ರಾಯರ ಸಂಸಾರದ ವಿಷಯದಲ್ಲಿ ಮತ್ತು ನನ್ನ ಅವರ ಸ್ನೇಹದ ಬಗ್ಗೆ ಸಹಾನುಭೂತಿ ಯನ್ನೇ ತೋರುತ್ತಿದ್ದೆ. ಏನೋ ನನ್ನ ಪುಣ್ಯ.

ಇಷ್ಟೆಲ್ಲ ಬೆಳೆದು ಬಂದ ಸರಳ ಸಂಬಂಧದಲ್ಲಿ ಮಂಜುಳೆಯು ಅಂದು ವಿಕಾರವಶಳಾಗಿದ್ದು ಅಷ್ಟಕ್ಕೆ ಸುಮ್ಮನಿದ್ದರೆ, ಶಾಂತಾ ಆಪ್ಪೆಯು ಮೈ ಬಿಟ್ಟು ನಾಚಿಕೆ ತೊರೆದು ನಟಿಸಿದ ಸನ್ನಿವೇಶಗಳ ಪರಿಣಾಮಕ್ಕೆ ಹೊಣೆ ಮಾಡುತ್ತಿದ್ದೆ.

ಆವರಿ ಪೂರ್ಣಿ, ಮಂಜುಳೆ ಒಂದು ಹೆಜ್ಜೆಯನ್ನು ಮುಂದಿಟ್ಟಳು. ಇದಕ್ಕೆ ಸದ್ಯದ ಕಾರಣ ಈ ಚಲನಚಿತ್ರವಾಗಿದ್ದರೂ, ಸೂತ್ರಧಾರಿ ಆ ಮಹಾ ತಾಯಿ ಶಂಕರಮ್ಮನವರೇ. ಅವರು ತಮ್ಮ ನಿತ್ಯದ ಮಂತ್ರವನ್ನು ನನ್ನ ಮೇಲೆ ಮೊದಲು ಪ್ರಯೋಗಿಸಿ ಮಂಜುಳೆಯನ್ನು ತನ್ನ ಲೋಕಕ್ಕೆ ಕರೆದುಕೊಳ್ಳ ಬೇಕೆಂದು ಹಾಕಿಕೊಂಡ ಹೊಂಚಾಗಿದ್ದಿತು.

ನನಗೆ ನಿನ್ನನ್ನು ಡಾಕ್ಟರ ಮನೆಗೆ ಕರೆದುಕೊಂಡು ಹೋಗಲು ಸಮಯ ಸಿಕ್ಕಲೇ ಇಲ್ಲ. ಏಕೆಂದರೆ ನೀನು ಅದೇ ವರ್ಷ ಗರ್ಭಿಣಿ: ಬಾಣಂತಿ ಎಳೆ

ಮಗುವಿನ ತಾಯಿ. ಹೀಗಾಗಿ ಮೈಸೂರಿಗೆ ಬರುವುದು ಸರಿಯೆನಿಸಲಿಲ್ಲ. ಇದೇ ಶಂಕರಮ್ಮನ ಸಮಯ ಸಾಧನೆಗೆ ಒಳ್ಳೆಯ ಕಾರಣವಾಯಿತು. ಮಂಜು ಳೆಯ ಕಿವಿಯಲ್ಲಿ ಉರುಬಿದ ಮಂತ್ರದಿಂದ ಮಂಜುಳೆ ನಾನಲ್ಲಿಗೆ ಹೋಗಿ ಬರುವುದನ್ನು ಅನ್ಯಥ ಭಾವಿಸಿಬಿಟ್ಟಿದ್ದಳು. ನಾನು ಆಗಿಂದಾಗ್ಗೆ ತೋರಿಸು ತ್ತಿದ್ದ ಮರುಕಕ್ಕೆ ಅಪಾರ್ಥವನ್ನು ಕಲ್ಪಿಸಿಕೊಂಡಿದ್ದಳು. ನಿಮ್ಮ ಚಿಕ್ಕಮ್ಮ ಮಾಡಿದ ಕರುಣೋಪದೇಶ ಏನು ಗೊತ್ತೆ? ''ನಮ್ಮ ಹುಡುಗನ ಹೆಂಡತಿ ಹೆಸ ರಿಗೆ ಮಾತ್ರ ಹೆಂಗಸು. ಆಕೆ ಕಪ್ಪೆಂದರೆ ಕಪ್ಪು. ನಮ್ಮಾತ ರಾಮನಂತಹ ಒಳ್ಳೇ ಹುಡುಗ. ಏನಿದ್ದರೇನು ಹಲ್ಲಿದ್ದರೆ ಕಡಲೆಯಿಲ್ಲ ಕಡ್ಲೆಯಿದ್ದರೆ ಹಲ್ಲಿಲ್ಲ. ಅವ ನಿಗೆ ಅದೊಂದೇ ಕೊರಗು" ಎಂದು ಆರಂಭಿಸಿದ ಆಕೆಯ ಯಕ್ಷಿಣಿಮಂತ್ರವು ಮಂಜುಳೆಯನ್ನು, ಅಂದು ಆ ಚಿತ್ರವನ್ನು ನೋಡಿ ಹಿಂದಿರುಗಿ ಬಂದ ರಾತ್ರಿ, ನಾನು ಮಹಡಿಯ ಮೇಲೆ ಮಲಗಿದ್ದ ಕೊಠಡಿಯ ಎದುರಿಗೆ ಆವೇಶ ಬಂದವ ರಂತೆ ಬರಲು ಪ್ರೇರೇಪಿಸಿತು.

ಅಯ್ಯೋ ಪಾಪ! ನನಗಂದು ಮಂಜುಳೆಯನ್ನು ನೋಡಿ ಹೆದರಿಕೆ ಯಾಯಿತು. ಎಲ್ಲವನ್ನೂ ಶಂಕರಮ್ಮನು, ಹೇಳಿದುದೆಲ್ಲವನ್ನೂ ಜಳಜಳನೆ ಹೇಳಿ ಹಾಸಿಗೆಯ ಮೇಲೆ ಕುಳಿತ ಮಂಜುಳೆಯನ್ನು ನೋಡಿ ಮುಖದ ತುಂಬ ನನಗೆ ಬೆವರು ಬಂದಿತು. ಆದರೂ ನನ್ನಲ್ಲಿ ಇಲ್ಲದ ಧೈರ್ಯ ದಿಂದ ನಾನು ಆಕೆಗೆ ಹಿತೋಪದೇಶ ಮಾಡಿದೆ. ಅವಳ ಚೆಲುವನ್ನು ಕಣ್ಣೆತ್ತಿ ನೋಡಲಿಲ್ಲ. ಯಾರ ಪುಣ್ಯವೋ, ನಿನ್ನ ಪ್ರೀತಿಯ ಮಹಿ ಮೆಯೋ, ನನ್ನ ಅಮ್ಮನ ಸಂಸ್ಕಾರದ ಬಲವೋ, ಮಂಜಳೆಯನ್ನೂ ಸಮಾ ಧಾನಪಡಿಸಿ ನನ್ನ ಎಂದಿನಂತಹ ತಂಗಿಯನ್ನಾಗಿಯೇ ಉಳಿಸಿ ಕಳುಹಿಸು ವುದರಲ್ಲಿ ಯಶಸ್ವಿಯಾದೆ. ಆದರೆ ಅಪವಾದ ತಪ್ಪುವಂತಿರಲಿಲ್ಲ. ಮಂಜುಳೆ ಮಹಡಿಯಿಂದ ಇಳಿಯುವಾಗ ಜಾರಿ ಬಿದ್ದಳು. ನಾನು ಕೊಠಡಿಯಿಂದ ಕೆಳಗೆ ಇಳಿದು ಅವಳ ನೆರವಿಗೆ ಬರುವುದರೊಳಗಾಗಿ ಶ್ಯಾಮರಾಯರು ಚಂಪಳೊಂದಿಗೆ ಬಂದು ನಿಂತಿದ್ದರು. ಅವರನ್ನು ನನಗೆ ನೋಡಲಾಗ ಲಿಲ್ಲ. ಮಂಜುಳೆಯ ಕಾಲು ನೋವಾಗಿದ್ದರೂ ಮಾತಾಡಿಸದೆ ಸಮ ಯದ ಗಂಭೀರತೆಯನ್ನು ತಿಳಿದು ಅವರು ಒಳಗೆ ಹೋದರು. ಚಂಪ ಬಿಕ್ಕಿ ಬಿಕ್ಕಿ ನನ್ನನ್ನು ನೋಡುತ್ತ ನಿಂತಿದ್ದಳು. ಪೂರ್ಣೀ, ತಿಳಿದುಕೊ

ಆಗ ನನ್ನ ಪರಿಸ್ಥಿತಿ ಏನಾಗಿರಬೇಕೆಂದು? ಅಲ್ಲಿ ಯಾರಿಗೂ ನನ್ನ ಮಾತು ಬೇಕಾಗಿರಲಿಲ್ಲ. ನನ್ನ ವರ್ತನೆಯ ಬಗ್ಗೆ ಸಮಾಧಾನದ ಮಾತನ್ನು ಕೇಳಲು ಯಾರಿಗೂ ತಾಳ್ಮೆಯಿರಲಿಲ್ಲ. ಸನ್ನಿವೇಶದ ಗಂಭೀರತೆ ಅವರನ್ನು ಸ್ತಬ್ಧರನ್ನಾಗಿ ಮಾಡಿದ್ದಿತು. ಮಂಜುಳೆ ಮಾತ್ರ ದೀನವದನದಿಂದ ನನ್ನನ್ನು ನೋಡುತ್ತ, ಮೌನವಾಗಿಯೇ ಕ್ಷಮೆ ಕೋರುತ್ತಿದ್ದಳು. ಆಕೆಯನ್ನು ನಾನು ಕ್ಷಮಿಸುವದಿರಲಿ, ನನ್ನನ್ನು ಯಾರು ಕ್ಷಮಿಸಬೇಕು ಪೂರ್ಣಿ? ಈ ಸನ್ನಿವೇಶಕ್ಕೆ ಯಾರು ಹೊಣೆ ಹೇಳು? ಡಾಕ್ಟರರು ಬೆಳಗಿನಲ್ಲಿ ಬೇಗ ಎದ್ದು, ನಾನು ಮಾಳಿಗೆಯಿಳಿದು ಬರುವದರೊಳಗಾಗಿ ಹೊರಗೆ ಹೋಗಿದ್ದರು. ಚಂಪ ಗಂಭೀರವದನಳಾಗಿ ಒಂದು ಕಪ್ಪು ಕಾಫಿಯನ್ನು ನನ್ನ ಮುಂದಿಟ್ಟು ಮಾತನಾಡಿಸದೆ ಹೋದಳು. ಅಂದು ಮುಗಿದ ಸ್ನೇಹದೊಂದಿಗೆ ರಾಯರ ಸಂಸಾರದ ಸಂಬಂಧವೂ ತಪ್ಪಿತು.

ಆದರೇನು ಪೂರ್ಣಿ, ಯಾರು ಹೇಗೆ ಬೇಕಾದರೂ ಅರ್ಥಮಾಡಿಕೊಳ್ಳಲಿ. ನನಗೆ ಡಾಕ್ಟರ ಶಾಮರಾಯರು ಕಥಾನಾಯಕರಾಗಿ ಮಂಜುಳ ಎಂಬ ದಿವ್ಯ ಕಥಾವಸ್ತುವನ್ನು ನನ್ನ ನಾಟಕ ಸಾಹಿತ್ಯಕ್ಕೆ ದಯಪಾಲಿಸಿದರು. ಅಂದಿನ ರಾತ್ರಿ ಮಂಜುಳೆಯ ಮುಖದಲ್ಲಿ ಕಂಡ ಆ ಭಾವನೆಯ ವಿರಾಟರೂಪವು ನನಗೆ ಸಮಾಜದ ಗರ್ಭವನ್ನು ನೋಡಲು ಕಿಡಿಗಣ್ಣನ್ನು ದಾನ ಮಾಡಿತು. ಇಲ್ಲವಾದರೆ ನಾನು ಈ ಅಂಧ ಸಮಾಜದ ಅಂಧ ದಾಸರಲ್ಲಿ ಒಬ್ಬನಾಗಿದ್ದು ಜೀವಸಾಹಿತ್ಯವನ್ನು ಪಡೆಯುವದರಿಂದ ವಂಚಿತನಾಗಿಬಿಡುತ್ತಿದ್ದೆನೋ ಏನೋ?

ಈಗ್ಗೆ ಒಂದುವರ್ಷದ ಹಿಂದೆ ನಾನೂ ನೀನೂ ಮೈಸೂರು ಮಾರ್ಕೆಟಿನ ಮುಂದೆ ಬಳೆ ಅಂಗಡಿಯವನಿಗೆ ತಿಂಗಳ ಕಾಣಿಕೆಯನ್ನು ಒಪ್ಪಿಸುತ್ತಿದ್ದಾಗ ನಮ್ಮ ಪಕ್ಕಕ್ಕೆ ಒಂದು ಹುಡುಗಿ ಬಂದು ನಿಂತಳು. ಅವಳ ಪಕ್ಕದಲ್ಲಿ ಉನ್ನತ ಆಕೃತಿಯ ಭೀಮಕಾಯದ ಮಿಲಿಟರಿ ಉಡುಪಿನ ಒಬ್ಬ ಪುರುಷ ನಿಂತಿದ್ದನು. ಈ ಹುಡುಗಿ ನನ್ನ ಮುಖ ನೋಡಿದೊಡನೆಯೇ ತಲೆ ತಗ್ಗಿಸಿದುದು ನಿನಗೆ ಕಾಣಲಿಲ್ಲ. ಅದೆಲ್ಲವನ್ನೂ ಮೇಲು ಸೆರುಗಿನಲ್ಲಿ ಮುಚ್ಚಿಕೊಂಡಳು. ಆದರೆ ನನ್ನ ಕಡೆಗೆ ನೋಡಿದಾಗ ಆಕೆಯ ಕಣ್ಣಲ್ಲಿ

ದೀನತೆ ತುಂಬಿದ್ದಿತು. ಅತ್ತ ಆಕೆ ಸರಿದಕೂಡಲೇ ನಿನ್ನ ಹೆಗಲು ಚಿವುಟಿ ಈಕೆಯೇ ಡಾಕ್ಟರ ಶಾಮರಾಯರ ಮಂಜುಳೆ ಎಂದು ನಾನು ತೋರಿಸಿ ದಾಗ ನೀನು ಮಾರ್ಕೆಟ್ಟಿನಲ್ಲಿರುವುದನ್ನು ಮರೆತು, ಅಯ್ಯೋ, ಎಷ್ಟು ಚೆಲುವೆ ಈ ಹುಡುಗಿ ಎಂದು ನಿಟ್ಟುಸಿರನ್ನು ಬಿಟ್ಟ ನೆನಪಿದೆಯೇ? ಕೊನೆಗೆ ಆಕೆಯ ಜೊತೆಯಲ್ಲಿ ಇದ್ದವರಾರೆಂದು ಕೇಳಿದಾಗ ನಿನಗೆ ನಾನು ಉತ್ತರವೇನೂ ಹೇಳಲಾಗಲಿಲ್ಲ. ಶಂಕರಮ್ಮನ ಮಂತ್ರ ಫಲಿಸಿರಬೇಕು.

ನನಗೆ ಇತ್ತೀಚೆಗೆ ತಿಳಿದ ಸುದ್ದಿಯಂತೆ ಚಂಪಳೊಬ್ಬಳೇ ಡಾಕ್ಟರ ರಿಗೆ ಉಳಿದಳು. ಮಂಜುಳೆ ಮನೆಯಿಂದ ಹಾರಿಹೋದ ಹಕ್ಕಿಯಂತಾದ ಳಂತೆ. ಶಂಕರಮ್ಮನ ಸ್ನೇಹ ಬಹಳವಂತೆ. ಹೋದ ದಸರಾದಲ್ಲಿ ನಾನು ಹೆಚ್ಚು ಧೈರ್ಯಮಾಡಿ ಇವರ ಯೋಗಕ್ಷೇಮ ತಿಳಿದುಕೊಳ್ಳಲು ಮನೆಗೆ ಹೋದೆ. ರಸಿಕ ರಾಯರಮನೆಯ ವೀಣೆಯ ಮೇಲೆ ಧೂಳು ಕುಳಿತಿ ದ್ದಿತು. ರಾಯರಿರಲಿಲ್ಲ, ಚಂಪಳೊಬ್ಬಳೇ ಮೊದಲ ಮುಗುನಗೆಯಲ್ಲಿಯೇ ನನ್ನನ್ನು ಸ್ವಾಗತಿಸಿದಳು. ಹೋಗಿ ಕಾಫಿ ಕುಡಿದ ಮೇಲೆ ಮಂಜುಳೆ ಎಲ್ಲಿ ಎಂದು ಕೇಳಿದೆ. ಚಂಪ ತಲೆ ತಗ್ಗಿಸಿ ಉಗುರಿನಿಂದ ನೆಲ ಕೆರೆದಳು. ಮೆಲುದನಿಯಲ್ಲಿಯೇ ಆಕೆ ಈಗ ಇಲ್ಲಿ ಇಲ್ಲ ಎಂದಳು. ಹೆಚ್ಚು ಕೇಳಲಿಲ್ಲ. ಡಾಕ್ಟರ ಎಲ್ಲಿ ಎಂದು ಕೇಳಿದಾಗ ಬೆಂಗಳೂರಿಗೆ ಹೋಗಿರುವರೆಂದು ಉತ್ತರ ಬಂತು. ಅವರಿಗೆ ನಾನು ಬಂದಿದ್ದೆನೆಂದು, ಈಗ ನಾನು ಹುಬ್ಬ ಳ್ಳಿಯಲ್ಲಿರುವೆನೆಂದು ಹೇಳಿರೆಂದು ಸೂಚಿಸಿದೆ. ಚಂಪ ನನ್ನನ್ನು ಊಟಕ್ಕೆ ನೆಪಮಾತ್ರಕ್ಕೂ ಕರೆಯಲಿಲ್ಲ. ನನಗಾಗಿ ವಿಶೇಷ ಉತ್ಸಾಹದಿಂದ ಕಾಯಿ ಚಟ್ನಿಯನ್ನು ಮಾಡುತ್ತಿದ್ದ ಚಂಪಳಿಗೆ ನನಗೆ ಊಟ ಬಡಿಸ ಬೇಕೆಂದರೆ ಬಲು ಸಡಗರ. ಈ ಸೋದರಿ ಪ್ರೇಮವೆಲ್ಲವನ್ನೂ ಸೂರೆ ಗೊಂಡು ರಾಯರ ಸಂಸಾರಕ್ಕೆ ಬೆಂಕಿಯಿಟ್ಟ ಮಹಾತಾಯಿ ಶಂಕರಮ್ಮ. ಈಕೆಗೆ ನಲವತ್ತು ತುಂಬಿದರೂ ಇನ್ನೂ ಸಾವು ಬಾರದು. ಇಂತಹ ರನ್ನು ಕಂಡರೆ ಯಮನಿಗೆ ಎಲ್ಲೂ ಇಲ್ಲದ ಕರುಣೆ! ಸಾಕಾಯಿತು. ಕೈ ನೋವು. ಬರೆಯುವಷ್ಟನ್ನು ಬರೆದನು. ಇನ್ನು ಮುಂದೆ ನನ್ನ ನೆನಹಿನ ಬುತ್ತಿಯನ್ನು ಮನಸ್ಸಿಗೆ ಬಂದಂತೆ ನನ್ನನ್ನು ಕೇಳದೆ ಬಿಚ್ಚಲು ಯತ್ನಿಸಬೇಡ.

ಇಲ್ಲಿ ಬರೆದು ಸಾಕಾದರೆ ಗಾಳಿಹಾಕುವರಿಲ್ಲ. ಬಾಯಾರಿದರೆ ಕಾಫಿಯನ್ನು ತಂದು ಕುಡಿಸುವವರಿಲ್ಲ. ಭಾವನೆಯ ಉದ್ವೇಗ ನೆತ್ತಿಗೇರಿ ತಲೆಯುರಿ ಬಂದರೆ ತಲೆನೀವುವರಿಲ್ಲ. ಇಷ್ಟು ದೂರ ನನ್ನನ್ನು ಬಿಟ್ಟು ಅಲ್ಲಿಂದಲೇ ಕುಳಿತು ನಾಡಿಯನ್ನು ಮಿಡಿದು ನಿನಗೆ ಬೇಕಾದುದನ್ನು ಬರೆಸಿಕೊಳ್ಳುವ ಬಿನ್ನಾಣ ಸಾಕಿನ್ನು. ಇನ್ನು ಮುಂದೆ ನಾನೆಷ್ಟು ಬರೆಯುವೆನೋ ಅಷ್ಟೇ ಸಾಕು. ತಲೆ ಹರಟೆ ಮುಂದೆ ಮಾಡಿ ನನ್ನೆಲ್ಲ ಕಥೆಯನ್ನು ಕಾಗದದ ಮೇಲೆ ಇಳಿಸಬೇಡ, ಎಚ್ಚರ! ನನ್ನಿಂದ ಬರೆಯಿಸಬೇಕಾದರೆ, ಮುದ್ದಣನ ಮುಂದೆ ಮುದ್ದುಮುದ್ದಾಗಿ ನಿಂತು ಮಾತಾಡಿ ಜಗಳಹೂಡಿ ರಾಮಾಶ್ವಮೇಧವನ್ನು ಬರೆಸಿದ ಮನೋರಮೆಯಂತೆ ಬರೆಸುವದಾದರೆ ಬರೆಸು. ನಾನೊಲ್ಲೆನೆನ್ನುವುದಿಲ್ಲ.

ಈ ಪತ್ರದಲ್ಲಿ ಬರೆದಿರುವದೆಲ್ಲವೂ ನಿಮ್ಮ ಚಿಕ್ಕಮ್ಮನಿಗೆ ಗೊತ್ತಾದರೆ? ಗೊತ್ತಾಗಲೇಳು; ನನಗೇನು ಭಯ? ನೀತಿಗೆಟ್ಟವರಿಗೆ ಇರುವ ಎದೆತನದ ಎತ್ತರ ನನಗೆ ಗೊತ್ತು. ಅವರು ಲೋಕದ ಮುಂದೆ ಹಿರಿಯ ಹೆಂಬೇಡಿಗಳು.

**ಇತಿ ನಿನ್ನ ಒಲವಿನ ಪತಿ.**

x x x

## [೧೭]

ಎಲ್ಲ ಕೆಲಸಗಳನ್ನು ಬಿಟ್ಟು, ವಿರಾಮದಿಂದ ಬಿಡುವು ಮಾಡಿಕೊಂಡು ಈಗಲೇ ಪತ್ರಬರೆಯಬೇಕಾಗಿದೆ ನಿನಗೆ. ನಾನಿಂದು ಏನನ್ನು ನೋಡಿದೆನೋ ಯಾವ ಯಾವ ಭಾವನೆಗಳು ನನ್ನನ್ನು ಅಳುವಂತೆ ಮಾಡಿಸಿದವೋ ಅವೆಲ್ಲವನ್ನೂ ತಿಳಿಸಿಬಿಡಬೇಕೆಂದು ಅವಸರವಸರವಾಗಿ ಪತ್ರ ಬರೆಯುತ್ತಿರುವೆನು.

ಧಾರವಾಡವು ಹುಬ್ಬಳ್ಳಿಗಿಂತ ಚೆನ್ನು. ಇಲ್ಲಿರಲು ನನಗೆ ಬಹು ಮನಸ್ಸಿದೆಯೆಂದು ನೀನು ಇಲ್ಲಿಗೆ ಬಂದಾಗ ಹೇಳಿದ್ದಿಯಲ್ಲವೇ? ಹೌದು, ಧಾರವಾಡ

ನನಗೂ ಬಲುಚಂದ. ಅದನ್ನು ನೆನಸಿಕೊಂಡ ಮೊದಲೇ ನನ್ನ ಕಣ್ಣಿಗೆ ಶಿ. ಶಿ. ಬಸವನಾಳರು ಅವರ ಸಮಕ್ಕೆ ಅಂಬಿಕಾತನಯ ದತ್ತರು ( ಪ್ರೋ. ದ. ರಾ. ಬೇಂದ್ರೆ ) ಮುಂದೆ ಬಂದು ನಿಂತುಕೊಳ್ಳುವರು. ಆಗ ಹೋದ ಮುದವೀಡು ಕೃಷ್ಣರಾಯರ ಊರು ಇದೇ. ಈಗಿರುವ ಶ್ರೀ ಆಲೂರ ವೆಂಕಟ ರಾಯರೂ ಇಲ್ಲಿಯವರು. ಗಿಡಮರಗಳ ಸಂದಿನಲ್ಲಿರುವ . ಶಾಲೆಕಾಲೇಜುಗ ಳೆಲ್ಲಾ ಹಿಂದಿನಕಾಲದ ಗುರುಕುಲದಂತಿವೆ. ವಿದ್ಯಾರ್ಥಿಗಳು ಮಾತ್ರ ಆಗಿನ ಕಾಲದವರಲ್ಲ. ಸುಧಾರಿಸಿದವರು! ಕನ್ನಡದ ಶ್ರೀಯವರು ಬಲು ಬಯಸಿ, ಕೊನೆಯುಸಿರನ್ನು ಬಿಟ್ಟ ಊರಿದು. ಮಾಸ್ತಿಯವರು ಆಗಾಗ ವಿಶ್ರಾಂತಿಗೆಂದು ಬರುವ ಚೆಲುವಿನ ನಗರವಿದು. ತಮ್ಮ ತಮ್ಮ ಜೀವನ ಸುಖದುಃಖಗಳ ಕತೆಯನ್ನು ನೆನಿಸಿಕೊಂಡು ( So sad, so fresh, the days that are no more ) " ಅದೆಷ್ಟು ವ್ಯಸನಕರವಾಗಿ ಅದೆಷ್ಟು ಅಚ್ಚಳಿಯದಂತಿವೆ ಆ ಕಳೆದುಹೋದ ನನ್ನ ದಿನಗಳು" ಎಂದೆ ನ್ನುವ ನಿವೃತ್ತಿ ಜೀವಿಗಳಾದ, ಟೆನಿಸನ್ನರು ಧಾರವಾಡದಲ್ಲಿ ಎಲೆಯ ಮರೆಯ ಹಣ್ಣಾಗಿ ಇರುವರು. ವಿದ್ಯಾವರ್ಧಕ ಸಂಘವಿದೆ. ಮೈಸೂರು ಅರಸರ ಹೆಸರ ನ್ನೆತ್ತಿ ಹಾಡುವ ಸಂಸ್ಥೆ ಇದು. ಪ್ರಾದೇಶಿಕ ಗ್ರಂಥಭಾಂಡಾರ, ಕರ್ನಾಟಕ ವಿಶ್ವವಿದ್ಯಾನಿಲಯ, ಅನೇಕರ ಕೀರ್ತಿಯ ಗುರುವಾದ ಕರ್ನಾಟಕ ಕಾಲೇಜು ಇವೆಲ್ಲವೂ ಈ ಊರೊಂದರಲ್ಲಿಯೇ ಇವೆ. ಇಷ್ಟೇ ಅಲ್ಲ ಒಕ್ಕಲುತನದ ಕಾಲೇಜೂ ಇಲ್ಲಿದೆ. ಇನ್ನೇನು ಬೇಕು? ನಗರವು ಸುಸಂಸ್ಕೃತರಿಂದ ಸಂಸ್ಕಾರಗೊಂಡಿದೆ. ಇಷ್ಟಾದರೂ ಈ ಊರು ಇದೀಗ ಬಲು ನಿರ್ಭಾಗ್ಯ ಶಾಲಿ. ಹೊಟ್ಟೆಯ ಪಾಡಿಗಾಗಿ ನಾಡಿಗೊಬ್ಬನೇ ಕವಿಯಾದ ಅಂಬಿಕಾ ತನಯದತ್ತರನ್ನು ಸೊಲ್ಲಾಪುರಕ್ಕೆ ಕಳುಹಿಸಿಕೊಟ್ಟ ದೂರಿಗೆ ಈ ಊರು ಗುರಿಯಾಗಿದೆ. ದತ್ತರೇನು ಅಷ್ಟು ಸುಲಭರೇ? ಹೊರಗೆ ಎತ್ತಿ ಹಾಕಿದರೆ ಹೋಗಿ ಬಿಡುವಂತಹ ಜೀವವೇ ಅದು? ಯಾರು ಯಾವಾಗ ಹೋಗಿ ನೋಡಿದರೂ ಅವರು ಧಾರವಾಡದ ತಮ್ಮ ಮನೆಯಲ್ಲೇ ಇರು ವರು. ಕೆಲವರ ಕಣ್ಣಿಗೆ ಮಾತ್ರ ಕಾಣಿಸಿಕೊಳ್ಳುವರು. " ತಿಣಿತಿಣಿಕಿ........ ಕುಣಿಯೋಣು ಬಾರs ಕುಣಿಯೋಣುಬಾರ? "ಎಂದು ಹೋದವರನೆಲ್ಲ ಅದೃ ಶ್ಯವಾಗಿ ಕರೆಯುತ್ತಿರುವರು. ನೀನೊಮ್ಮೆ ಅವರನ್ನು ಮನೆಗೆ ಕರೆದು

ಕೊಂಡು ಬನ್ನಿಯೆಂದು ಆಗಂತುಕ ಗೃಹಸ್ಥಿಯಾಗಿದ್ದಾಗ ಹೇಳಿದ್ದಿಯಲ್ಲವೇ? ಹಿಂದೊಮ್ಮೆ ನಿನಗೆ ಕವಿಗಳ ಹುಚ್ಚು ಹಿಡಿದಿದ್ದಾಗ ನೀವೂ ಬೇಂದ್ರೆ ಕುವೆಂಪುರಂತೆ ನಾಡಕವಿಗಳಿಗಾಗಿರಿಯೆಂದು ಹರಸಿದ್ದೆ. ಆದರೆ ನಿನ್ನ ಹರಕೆ ಯಲ್ಲಿ ಬಲವಿಲ್ಲ. ನನ್ನ ಲೇಖನಿಯಲ್ಲಿ ಹುರುಳಿಲ್ಲ. ನಾನೆಂತು ಆಗಬಲ್ಲೆ? ನಿನ್ನ ಬಯಕೆಗೂ ಇತಿಮಿತಿ ಇರಬೇಡವೆ? ಅದರ ಚಿಂತೆ ಈಗೇಕೆ? ಅವ ರನ್ನು ಕಂಡು, ಹಾಡಿ, ಅವರನ್ನು ಓದಿ, ಅವರನ್ನು ಕೇಳುವ ಭಾಗ್ಯ ವಿದೆಯಲ್ಲ ಅಷ್ಟೇ ಸಾಕು ನಮಗೆ ನಾವಿಬ್ಬರೂ ಹೆಚ್ಚು ಬಯಸಿ ಹುಚ್ಚ ರಾಗುವುದೇಕೆ?

ಅದೋ, ಧಾರವಾಡದ ನಿಸರ್ಗದ ಸೊಬಗನ್ನು ಚಿತ್ರಿಸುವಾಗ ಬರೆ ಯಬೇಕಾದ ಮುಖ್ಯವಿಷಯವನ್ನೇ ಮರೆತು ಬಿಟ್ಟೆನು. ಅದೇ ನಾನು ಮೇಲೆ ಹೇಳಿದಂತೆ ಧಾರವಾಡದ ಸೌಭಾಗ್ಯ ಕಳಚಿ ಹೋಯಿತು. ಪ್ರೊ. ಶಿ. ಶಿ. ಬಸವನಾಳರು ತೀರಿಕೊಂಡರು ಹೃದಯವಿಕಾರದಿಂದ. ಯಾರಿಗೂ ಹೇಳದೆ ಕೇಳದೆ ೨೨ ಡಿಸೆಂಬರ ೧೯೫೧ ಮಧ್ಯಾಹ್ನ ಕರ್ನಾಟಕ ವಿಶ್ವ ವಿದ್ಯಾಲಯದ ಸಿಂಡಿಕೇಟಿನ ಸಭೆಯಿಂದ ಎದ್ದುಹೋಯುವುದೆಂದು ಮನೆಗೆ ಬಂದವರೇ ಮೆಚ್ಚಿನ ಮಡದಿ ಕಾಫಿಯನ್ನು ತಂದು ಕೊಡುವುದರೊಳಗಾಗಿ ಬಸವನಾಳರು ಶಿವೈಕ್ಯರಾದರು.

ಪೂರ್ಣೀ, ನನ್ನಲ್ಲಿ ಶಬ್ದಸಂಪತಿ ಇಲ್ಲ ಬಸವನಾಳರನ್ನು ಪರಿಚಯ ಮಾಡಿಕೊಡಲು. ಒಂದೇ ಮಾತಿನಲ್ಲಿ ಅವರ ಸಾವಿನ ನಷ್ಟವನ್ನು ಸರಿ ಯಾಗಿ ಹೇಳಬೇಕಾದರೆ, ಬಿ. ಎಂ. ಶ್ರೀ. ಇವರನು ಇನ್ನೊಂದ್ನು ಸಾರಿ ಕಳೆದುಕೊಂಡಂತಾಗಿರುವುದು. ಅವರಿನ್ನೂ ಕನ್ನಡವನ್ನು ಸಂಸ್ಕರಿಸಲು, ಸಂಶೋಧಿಸಲು, ಕೊನೆಯಪಕ್ಷ, ಇಪ್ಪತ್ತು ವರುಷಗಳಾದರೂ ಜೀವಿಸಿರ ಬೇಕಾಗಿದ್ದಿತು. ಇಂಗ್ಲೆಂಡಿನ ಬರ್ನಾರ್ಡ್‌ಷಾರವರಿಗೆ ೯೦ ವರುಷಗಳಾ ದರೂ ಜೀವಿಸಿರಲು ಅನುವುಮಾಡಿಕೊಟ್ಟ ವಿಧಿ ಧಾರವಾಡದ ಬಸವನಾಳ ರಿಗೆ ಅರವತ್ತು ವರುಷದ ಷಷ್ಟ್ಯಬ್ಧಿಯಾಗುವುದರ ಮುನ್ನ ಅವರನ್ನು ಹಿಂದಕ್ಕೆ ಕರೆದುಕೊಳ್ಳುವಷ್ಟು ನಿಪುಣನಾದನು. ಕನ್ನಡವನ್ನು ಕಂಡರೆ

ಸರಸ್ವತಿಗೆ ಬಲು ಇಷ್ಟವಾದರೂ ಅವಳ ಗಂಡ ಬ್ರಹ್ಮನಿಗೆ ಕನ್ನಡ ಕುಲ ಪುರುಷರ ಮೇಲೆ ಇಷ್ಟೊಂದು ಮಾತ್ಸರ್ಯವೇಕೋ ತಿಳಿಯದು.

ನೀನು ನಿನ್ನ ಎದೆಯ ಬಡಿತವನ್ನು ಬಿಗಿಹಿಡಿದುಕೊಳ್ಳುವುದಾದರೆ ಬಸವನಾಳರ ಸಾವಿನ ದೃಶ್ಯವನ್ನು ಹೇಳಿಬಿಡುವೆನು. ನಾನವರನ್ನು ದೂರ ದಿಂದಲೇ ನೋಡಿದವನು. ಅವರ ದೇಹತ್ಯಾಗದ ನಂತರವೇ ಅವರ ಬಳಿ ನಿಂತು ನೋಡಿದೆನು. ಎಂತಹ ದೃಶ್ಯವದು ಪೂರ್ಣಿ! ಬಸವನಾಳರ ಆ ಆವೃತ ಮುಖದಲ್ಲಿ ಇರುವ ಸಾತ್ವಿಕ ತೇಜಸ್ಸಿನ ಸಂಸ್ಕಾರದ ಪ್ರಭೆಯನ್ನು ದಿಟ್ಟವಾಗಿಯೇ ನೋಡಿದೆನು. ಇನ್ನು, ಇನ್ನೂ ನೋಡಬೇಕೆಂಬ ಆಶೆ. ಆದರೆ ಆ ಅಲುಗದ ಮುಖವನ್ನೂ, ಗಲ್ಲವನ್ನೂ ಅಲುಗಿಸುತ್ತಾ ಘೋರೆಂದು ರೋದಿಸುವ ಬಸವನಾಳರ ಶ್ರೀಮತಿಯವರನ್ನು ನೋಡುವುದು ನನ್ನಿಂದಾಗ ಲಿಲ್ಲ. ಯಾರಿಗೆ ಎಷ್ಟು ಎದೆ, ಆ ಕರುಳು ಕೊರೆಯುವ ದುಃಖದ ದೃಶ್ಯವನ್ನು ನೋಡಲು?

ಪೂರ್ಣಿ, ನಿಜವಾಗಿಯೂ ಹೇಳುವೆನು. ನೀನು ಅಷ್ಟೊಂದು ಅಳುವುದಾದರೆ ನಾನು ನಿನ್ನ ಕಣ್ಣೆದುರಿನಲ್ಲಿ ಸಾಯಲು ಬಯಸುವುದೇ ಇಲ್ಲ; ಕೈಲಾಸಪರ್ವತವನ್ನೂ ಏರುತ್ತಿದ್ದ ಬಸವನಾಳರನ್ನು ಹಿಂದು ಹಿಂದಕ್ಕೆಳೆಯುತ್ತಿದ್ದ ಆ ಆರ್ತರವವನ್ನು ಕಲ್ಲು ಹೃದಯಗಳು ಕಲ್ಲಾಗಿ ನಿಂತು ಕೇಳಬೇಕು.

ಬಸವನಾಳರು ಬಾಳಿದರು, ಬೆಳಗಿದರು, ಬೆಳಗಿಸಿದರು; ಇನ್ನೂ ಬೆಳಗುತ್ತಲೇ ಇರುವರು. ಇಂದು ಅಗಲಿಕೆಯ ಆವೇಶದಲ್ಲಿ ಬಸವನಾಳರ ಹೆಂಡತಿ ಮಕ್ಕಳು, ಅಳುತ್ತಿದ್ದರೆ, । ಈ ನೋವಿನ ಕಾವು ತೀರಿದ ಮೇಲೆ ಅವರು ಇಹಲೋಕದಲ್ಲಿ ಉಳಿಸಿ ಹೋದ ಕೀರ್ತಿಯ ಪಾರಿಜಾತ ಗಿಡವು ತೀಡುವ ತಿಳಿಗಾಳಿಯ ಗಂಧ ಇವರೆಲ್ಲರಿಗೂ ಸಮಾಧಾನವ ನ್ನುಂಟು ಮಾಡುವುದು. ನಾನು ಸತ್ತರೆ, ನಿನಗೆ ನನ್ನ ನೆನಪಿಗಾಗಿ ಉಳಿ ಯುವ ಲೀಲಾ, ಶಂಕರ, ರಾಘು ಇವರಲ್ಲದೆ ಮತ್ತೇನೂ ಇಲ್ಲ. ಬಸವ ನಾಳರ ಸಾಹಿತ್ಯದ ಸಾವಿರಾರು ಸಾಹಿತಿಗಳನ್ನು ಹೆತ್ತಿತು. ಅವರಿಗೊಮ್ಮೆ

ಸಾವಿರ ರೂಪಾಯಿಗಳ ಸಂಬಳದ ಕೆಲಸವನ್ನು ಕೈಕೊಳ್ಳುವಿರಾ ಯೆಂದು ಬೇಡಿಕೊಂಡಿದ್ದರಂತೆ. ಆಗ ಕೆಲಸದ ಬಗ್ಗೆ ಮಾತನಾಡಲು ಬಂದವರನ್ನು ಕುರಿತು ಅವರು "ಅಯ್ಯೋ ಹುಚ್ಚ, ಸಾವಿರ ರೂಪಾಯಿ ಪಗಾರವನ್ನು ತೆಗೆದುಕೊಳ್ಳುವ ಸಾವಿರಾರು ಜನರನ್ನು ತಯಾರಿಸಬಲ್ಲೆ. ನನಗೇಕೆ ಬೆನ್ನು ಬಿದ್ದೆ. ಹೋಗು, ಹೋಗು. ಮತ್ತಾರನ್ನಾದರೂ ನೋಡು ಹೋಗು'' ಎಂದು ಹೇಳಿ ಕಳುಹಿದರಂತೆ. ಇವರೆಲ್ಲಿ? ಹೊಟ್ಟೆಯ ಪಾಡಿಗಾಗಿ ಊರಿಂದೂರಿಗೆ ಅಲೆಯುತ್ತಿರುವ ನಾನೆಲ್ಲಿ? ನನ್ನ ಸಾಹಿತ್ಯವೆಂದರೆ ನಾನು ನಿನ್ನನ್ನು ಕುರಿತು ಬರೆಯುತ್ತಿರುವ ಈ ಪತ್ರಗಳಷ್ಟೇ. ಇವು ನಮ್ಮಿಬ್ಬರ ಸಂಸಾರದ ಸಾಹಿತ್ಯ. ನಾನು ಪತ್ರಿಕೋದ್ಯಮಿಯಾಗಿರುವ ಮಾತ್ರಕ್ಕೇ ನನ್ನನ್ನು ನಾನು ಸಾಹಿತಿಯೆಂದು ಕರೆದುಕೊಳ್ಳಲಾರೆ. ಏಕೆಂದರೆ, ಕಾರ್ಯನಿರತ ಪತ್ರಿಕೋದ್ಯಮಿಯು ಎಂದೂ ನಿಜವಾದ ಸಾಹಿತಿಯಾಗಿ ಉಳಿಯಲಾರ. ಸಾಹಿತ್ಯದ ಅವಶ್ಯಕತೆ ಅಷ್ಟಿಷ್ಟು ಇದ್ದರೂ ನಿಜವಾದ ಸಾಹಿತಿಯ ಅವಶ್ಯಕತೆ ಈಗಿನ ಪತ್ರಿಕೋದ್ಯಮಕ್ಕೆ ಬೇಕಾಗಿಲ್ಲವೆಂಬುದೇ ನನ್ನ ಭಾವನೆ. ಇದು ಅಭಿಪ್ರಾಯದ ಮಾತು. ಕೆಲವರೊಪ್ಪುವ, ಕೆಲವರೊಪ್ಪದ ವಿಷಯ. ಅದರ ವಿಚಾರಣೆ ಇಲ್ಲೇಕೆ ಗಂಡ ಹೆಂಡತಿಯ ಈ ಪತ್ರವ್ಯವಹಾರದಲ್ಲಿ?

ಮತ್ತೆ ಮರೆತೆನು ಪೂರ್ಣಿ, ಒಂದನ್ನು ಹೇಳಹೋಗಿ ಹನ್ನೊಂದನ್ನು ಹೇಳುವ ನನ್ನ ಚಟಕಿನ್ನೂ ಔಷಧಿ ದೊರೆತಿಲ್ಲ. ಬಸವ ಸಾಹಿತ್ಯವನ್ನು ಅರಗಿಸಿಕೊಂಡ ಬಸವನಾಳರ ಹೃದಯವು, ಹೃದಯವಿಕಾರಕ್ಕೆ ಈಡಾಯಿತೆಂಬುದು ಸೋಜಿಗದ ಸಂಗತಿ. ಹೃದಯ ರೋಗದ ಚಿನ್ಹೆ ಇದ್ದುದು ಇವರಿಗಲ್ಲ, ಇವರ ಪತ್ನಿಗೆ. ಇದೊಂದೇ ಬಸವನಾಳರ ಎದೆಯನ್ನು ಕೊರೆಯುತ್ತಿದ್ದ ಕೊರಗು. ಅಂದು ಕರ್ನಾಟಕ ವಿಶ್ವವಿದ್ಯಾಲಯದ ಸಿಂಡಿಕೇಟಿನ ಸಭೆಯಿಂದ ಎದೆಯ ನೋವೆಂದು ಹಿಂದಿರುಗಿದಾಗ ತನ್ನ ಹೆಂಡತಿಯನ್ನು ಕುರಿತು ವೈದ್ಯರು ಗುಣಪಡಿಸದ ನಿನ್ನ ಹೃದಯ ರೋಗವನ್ನು ನಾನೇ ತೆಗೆದುಕೊಂಡಿದ್ದೇನೆ, ಎಂದಂದು ಗಂಟೆಯೊಂದೂ ಕಳೆದಿಲ್ಲ. ಹೃದಯ ವಿಕಾರದಿಂದ ವಿಧಿವಶರಾದರು ಬಸವನಾಳರು. ನಿಜ

ವಾಗಿಯೂ ಇಂತು ಈ ಲೋಕವನ್ನು ಇವರು ಬಿಟ್ಟಿದ್ದರೆ ಅವರಿಗೆ ಅಭಿಷೇಕವು ಸಾಹಿತ್ಯ ಲೋಕದಲ್ಲಿ ಮಾತ್ರವಲ್ಲ, ಪ್ರೇಮ ಸಾಮ್ರಾಜ್ಯದಲ್ಲೂ ಸಹಾ. ಬಸವನಾಳರನ್ನು ಪತಿಯನ್ನಾಗಿ ಪಡೆದ ಈ ಸತಿಯ ಸೌಭಾಗ್ಯವೆಷ್ಟು? ಬಸವನಾಳರನ್ನು ಕನ್ನಡಿಗರಾಗಿ ಪಡೆದ ಕನ್ನಡಿಗರಿಗೆ ಎಷ್ಟು ಅಭಿಮಾನ? ಅದೋ, ಅದೇದೃಶ್ಯ;ಧಾರವಾಡ, ಮಾಳಮಡಿ; ಪಕ್ಕದಲ್ಲಿ ಉಳವಿ ಚೆನ್ನಬಸವೇಶ್ವರನ ದೇವಾಲಯ. ಅಲ್ಲಿಯೇ ಅಚ್ಚುಮೆಚ್ಚಿನ ಮನೆ, ಮನೆ ಮುಂದೆ ಜನ. ಅದರ ಮಧ್ಯೆ ಪೂಜೆಗೆ ಸಿದ್ಧವಾದ ಉತ್ಸವ ಮೂರ್ತಿಯಂತೆ ಕುಳಿತ ಬಸವನಾಳರ ಭೌತಿಕ ದೇಹ. ಅದನ್ನು ನೋಡಿ,ನೋಡಿ, ರಾಗವಾಗಿ ಆಕ್ರಂದನ ಸ್ವರದಲ್ಲಿ ಗಂಟಲು ಗೀಚಿಹೋಗುವಂತೆ, ಭಜನೆ ಗೀತೆಗಳನ್ನು ಹಾಡುವ ಭಜನೆಯ ಮೇಳ. ಈ ಮೇಳದ ಸ್ವರವನ್ನು ಮೀರಿಸಿ ರೋದಿಸುವ ಶ್ರೀಮತಿಯವರ ಶೋಕಧ್ವನಿ. ಇವು ಕಣ್ಣಿಗೆ ಕಟ್ಟಿ ಹೋಗಿವೆ. ನನಗೆ ಬಸವನಾಳರ ನಿಕಟ ಪರಿಚಯವಿಲ್ಲ. ಅವರೊಡನೆ ಮಾತನಾಡಿಯೂ ಇಲ್ಲ. ಅವರ ಕೀರ್ತಿ ಕೇಳಿ, ಅವರನ್ನು ದೂರದಿಂದ ನೋಡಿದ ನನಗೇ ಅವರ ಸಾವು ಇಂತು ಎದೆಯ ಚಿತ್ರವಾಗಿರುವಾಗ, ಅವರ ಒಡನಾಡಿಗರಿಗೆ ಅವರಿಂದ ಬೆಳೆದವರಿಗೆ ಎಷ್ಟೊಂದು ದುಃಖವಾಗಿರಬೇಕು ಊಹಿಸಿಕೋ.

ಈ ಪತ್ರದಲ್ಲಿ ಮತ್ತಾವುದನ್ನೂ ಸೇರಿಸಲಾರೆ. ನೆನಪಿನ ಶಕ್ತಿಯೂ ಕುಂಠಿತವಾಗಿದೆ ಭಾವಪ್ರಧಾನತೆಯ ಒತ್ತಡದಿಂದ. ಆದುದರಿಂದ ಈ ಪತ್ರವನ್ನು ಇಲ್ಲಿಗೇ ಮುಗಿಸುವೆನು.

ಇತಿ ನಿನ್ನ "ಲಕ್ಷ್ಮೀಶ".

x x x x

## [೧೮]

**ಪ್ರಿಯ ಪೂರ್ಣಿಮಾ,**

ಸ್ವಲ್ಪ ತಾಳು. ಎರಡುವಾರ ನಾನೇಕೆ ಒಂದು ಪತ್ರವನ್ನೂ ಬರೆಯಲಿಲ್ಲವೆಂಬುದಕ್ಕೆ ಸಕಾರಣ ಕೊಟ್ಟು ಸಮಾಧಾನ ಪಡಿಸುವೆನು. ಚುನಾವಣೆ, ಮಹಾಚುನಾವಣೆ; ಕರ್ನಾಟಕದಲ್ಲಿ ಬಿರುಸಿನ ತುರಿಸು. ಇದು ಕಾಂಗ್ರೆಸ್

ಪ್ರಾಂತವಾದರೂ, ಕಾಂಗ್ರೆಸ್ಸಿನ ಪ್ರತಿಸ್ಪರ್ಧಿಗಳು ಇಲ್ಲಿ ಬಹಳ. ಹೀಗಾಗಿ ಕಾಂಗ್ರೆಸ್ಸು ತನ್ನ ಎದುರಾಳಿಗಳನ್ನು ಉದಾಸೀನತೆಯಿಂದ ನೋಡಲಾಗ ಲಿಲ್ಲ. ಅಂದ ಮೇಲೆ ಕಾಂಗ್ರೆಸ್ಸಿನ ಮುಖಪತ್ರದಂತಿರುವ ನಮ್ಮ ಪತ್ರಿ ಕೆಯು ತನ್ನ ಉದ್ದಗಲದಷ್ಟೂ ಕಾಂಗ್ರೆಸ್ಸಿನ ಪ್ರಚಾರವನ್ನು ಮಾಡಬೇಕಾ ಗಿದ್ದಾಗ ನನಗೆ ಎಂದಿನಂತೆ ನಿನಗೆ ಆರಾರು ಪುಟಗಳಷ್ಟು ಪತ್ರ ಬರೆಯು ವುದಕ್ಕೆ ವೇಳೆ ಎಲ್ಲಿಂದ ತರಲಿ?

"ನಿದ್ದೆಗೆ, ಊಟಕ್ಕೆ, ಸಿನಮಾಕ್ಕೆ, ಎಲ್ಲಕ್ಕೂ ವೇಳೆ ಇದೆ. ನನಗೆ ನೀವು ಪತ್ರ ಬರೆಯುವ ವೇಳೆ ಯಾರಿಗೆ ಹೋಗಿದೆ? ಕೇಳಬೇಕೋ ಬೇಡವೋ?" ಎಂದು ಬಲು ಜೋರಿನಿಂದ ಕೇಳಿರುವಿ. ಇದಕ್ಕೆ ಉತ್ತರ ಮೇಲಿನಷ್ಟೇ. ನಂಬಿದರೆ ನಂಬು. ನಿನಗೆ ಪತ್ರ ಬರೆ ಯುವ ವೇಳೆಯು ಯಾರಿಗೂ ಹೋಗಿಲ್ಲ. ನಿನಗೇ ಅದು ಮೀಸಲು. ಉಳಿದ ವರು ಯಾರು ಓದಬೇಕು ಈ ನನ್ನ ಪುರಾಣವನ್ನು! ನಿನಗಂತೂ ವಿಧಿ ಯಿಲ್ಲ; ಅದು ನನ್ನ ಮತ್ತು ನಿನ್ನ, ಇಬ್ಬರ ಕತೆಯಲ್ಲವೆ?

ಕೊಂಕು ನುಡಿ ನಿನ್ನ ಬುದ್ಧಿಯ ಬಂಡವಲು. ಅದನ್ನು ಬರೆಯದೆ ಒಂದು ಪತ್ರವನ್ನೂ ಮುಗಿಸುವಂತಿಲ್ಲ. "ತಾವು ಚುನಾವಣೆಯಲ್ಲಿ ಎಲ್ಲಿಗೆ ಚುನಾಯಿಸಲ್ಪಟ್ಟಿರುವಿರಿ." ಎಂದು ಅಣಕವಾಡಿರುವಿ. ಹೌದು, ನೀನಲ್ಲದೆ ಇನ್ನಾರು ನನ್ನನ್ನು ಅಣಕಿಸಬೇಕು? ನಾನು ಚುನಾವಣೆಗೆ ನಿಂತೂ ಆಯಿತು. ಆರಿಸಿಯೂ ಆಯಿತು. ನನ್ನ ಮತಕ್ಷೇತ್ರದ ಹೆಸರು ಪೂರ್ಣಿಮಾ. ಇದ ರಲ್ಲಿ ಪ್ರತಿಸ್ಪರ್ಧಿಗಳೇ ಇರಲಿಲ್ಲ. ಪ್ರಚಾರದ ಅವಶ್ಯಕತೆಯಿಲ್ಲದೆ ಅವಿ ರೋಧವಾಗಿ ಆರಿಸಿ ಬಂದೆನು. ಆರಿಸಿ ಕೊಂಡವಳು ಪೂರ್ಣಿ; ಮತ್ತಾವ ಚುನಾವಣೆ ನನಗೆ?

ಈ ಸಲ ನಿನ್ನ ಪತ್ರದಲ್ಲಿ ಒಟ್ಟಿಗೇ ಮೂರೂ ನಾಲ್ಕು ಪ್ರಶ್ನೆಗಳನ್ನು ಸೇರಿಸಿರುವೆ. ಅಣಕದ ಮಾತಿರಲಿ "ಗಂಡುಸಿನ ಹೃದಯ" ನಿನ್ನದು ಎಂದು ನಾನು ಬರೆದರೆ, ಅದಕ್ಕೆ ಉತ್ತರಕೊಡುವಾಗ ಗುರುವಿಗೇ ತಿರು ಮಂತ್ರ ಹೇಳಿದೆ. ಗಂಡುಸಿನ ಹೃದಯವನ್ನು ಗಡುಸೆಂದು ನಿಮ್ಮ ಮಾತಿ

ನಲ್ಲೀ ನೀವೇ ಒಪ್ಪಿಕೊಂಡಾಯಿತಲ್ಲವೆ?" ಎಂದು ತಕ್ಷಣವೇ ನನ್ನ ಮಾತನ್ನು ನನಗೇ ತಿರುಗಿಸಿ ಬಿಟ್ಟಿರುವೆ. ಪೂರ್ಣೀ, ಒಮ್ಮೆಲೇ ನೀನು ಇಷ್ಟೊಂದು ಬುದ್ಧಿವಂತೆಯಾಗಬೇಡ. ಸ್ವಲ್ಪ ತಾಳು, ನೀನು ಏನೇ ಹೇಳು ನನಗಿಂತ ನಿನ್ನ ಮನಸ್ಸು ಸ್ವಲ್ಪ ಕಠಿಣವೆಂದೇ ಹೇಳುವೆನು. ನೀನೊಪ್ಪಿಕೊಳ್ಳುವುದಿಲ್ಲ ನನಗೆ ಗೊತ್ತು. ನೀನು ಯಾವುದನ್ನು ತಾನೆ ಒಪ್ಪಿಕೊಂಡಿರುವೆ ಹೇಳು, ನೋಡೋಣ. ಹೋಗಲಿ ನಿನ್ನ ಒಪ್ಪುತಪ್ಪುಗಳನ್ನೆಲ್ಲಾ ಬದಿಗಿಟ್ಟು ನಿನ್ನನ್ನು ಒಪ್ಪಿಕೊಂಡು ಅಪ್ಪಿಕೊಂಡು ವರುಷ ಹದಿನೈದು ಮುಗಿದಿರುವಾಗ ಈಗೇಕೆ ಅದರ ವಿಮರ್ಶೆ? ಮತ್ತೆ ಸಿಟ್ಟಾಗಿ ಮಾರುದ್ದದ ಪತ್ರ ಬರೆದು ಮೋರೆ ಮೊಳದಷ್ಟು ಉದ್ದ ಮಾಡಿಕೊಂಡರೆ ಸಮಾಧಾನ ಪಡಿಸಲು ನಾನೇ ಗಾವುದ ಗಾವುದ ರೆಕ್ಕೆಯಿಲ್ಲದೇ ಹಾರಿಬಂದು ಆರೈಕೆ ಮಾಡಬೇಕಾದೀತು.

ಎಲ್ಲೋ, ನೀನು ಓದಿರಬಹುದು, ವಾಲ್ಟೇರನ ಆ ಸ್ತ್ರೀ ಪಕ್ಷಪಾತಿತ್ವದ ಮಾತುಗಳನ್ನು ನಾನು, ಒಮ್ಮೊಮ್ಮೆ ಸ್ತ್ರೀ ಸಹಾನುಭೂತಿ ಪರನಾದಾಗ ಅಂತಹ ಜನರ ಮಾತುಗಳನ್ನು ನಿನಗೆ ಓದಿ ಹೇಳುತ್ತಿದ್ದೆ. ಅದನ್ನೆಲ್ಲಾ ನೆನಪಿನಲ್ಲಿಟ್ಟುಕೊಂಡು ನನ್ನ ಮೇಲೆಯೇ ಅಧಿಕಾರವನ್ನು ಚಲಾಯಿಸುತ್ತಿರುವಂತಿದೆ.

"All reasoning of men are not worth one sentiment of woman" ಅಂದರೆ "ಮನುಷ್ಯನ ವಿವೇಚನಾ ಶಕ್ತಿಯೆಲ್ಲವೂ, ಸ್ತ್ರೀಯ ಒಂದು ಭಾವನಾ ಬಲದೊಂದಿಗೆ ಸರಿದೂಗಲಾರದು'' ಎಂದು ಈ ಮಹಾರಾಯ ಹೇಳಿಬಿಟ್ಟು ಕೆಲವು ಗಂಡಸರ ಪ್ರಾಣಕ್ಕೇ ಸಂಚಕಾರ ತಂದಿರುವನು. ''ನಿಮ್ಮ ಸುಖಕ್ಕಾಗಿ, ನಿಮ್ಮ ಏಳಿಗೆಗಾಗಿ, ನಿಮ್ಮ ಶ್ರೇಯಸ್ಸಿಗಾಗಿ, ಇಲ್ಲಿ ಏಕಾಕಿಯಾಗಿ ನಾನು ಬಾಳುತ್ತಿರುವೆನು. ನಿಮ್ಮ ಸಂಪಾದನೆಗಿಂತ ನಿಮ್ಮ ಅಗಲುವಿಕೆಯು ಕಷ್ಟ ನನಗೆಷ್ಟಿದೆ ಆದರೂ ಅದನ್ನು ಸಹಿಸಿಕೊಂಡಿರುವೆನು. ನಿಮಗದು ತಿಳಿದಿಲ್ಲ" ಎಂದು ನೀನು ಮೊನ್ನಿನ ಪತ್ರದಲ್ಲಿ ಸಿಟ್ಟಿಗೆದ್ದು ಬರೆದಿರುವೆ. ಇದು ಸ್ತ್ರೀಯ ಭಾವನಾ ಶಕ್ತಿ. ಈ ಶಕ್ತಿಯ ಮುಂದೆ ನಾನು ನಿನಗೆ ಈ ನಾಲ್ಕು ವರುಷಗ

ಳಲ್ಲಿ ಬರೆದ ನನ್ನ ನೂರಾರು ಪತ್ರಗಳು ನಿರ್ಜೀವಿಯಾದವೆಂದು ತಿಳಿದು ಕೊಳ್ಳಬಾರದೇಕೆ?

ಪೂರ್ಣೀ, ಇನ್ನು ಮುಂದೆ ಇಂತಹ ಶಕ್ತಿಯನ್ನು ನನ್ನ ಮೇಲೆ ಪ್ರಯೋಗಿಸಬೇಡ. ಹೌದು, ಹೌದು, ನೀನೇ ಕೊನೆಯಲ್ಲಿ ಪತ್ರವನ್ನು ಮುಗಿಸುವಾಗ "ಇನ್ನು ಹೆಚ್ಚು ಬರೆದು ನಿಮ್ಮ ಹೆಣ್ಣಿನ ಹೃದಯವನ್ನು ನೋಯಿಸಲು ಇಷ್ಟವಿಲ್ಲ" ಎಂದು ಬರೆದಿರುವಿ. ನನ್ನದು ಹೆಣ್ಣಿನ ಹೃದ ಯವಲ್ಲ 'ಹೆಣ್ಣುಹೃದಯು' ಗೊತ್ತಾಯಿತೇ? ಒಂದಕ್ಷರದಲ್ಲಿ ಬೆಟ್ಟದಷ್ಟು ಅರ್ಥ ಅಂತರವಾಗುವುದು.

ಈಗ ಕೈ ಬಿಡುವಾಗಿದೆ; ಕರ್ನಾಟಕದಲ್ಲಿ ಕಾಂಗ್ರೆಸ್ಸು ಜಯಭೇರಿ ಯನ್ನು ಹೊಡೆಯಿತು. ಪ್ರತಿಸ್ಪರ್ಧಿಗಳ ತೇಜೋವಧೆ ಆಗಬಾರದಷ್ಟು ಆಯಿತು. ಪ್ರಚಾರ ಅಪಪ್ರಚಾರಗಳ ಘರ್ಷಣೆಯಲ್ಲಿ ಹಳ್ಳಿಹಳ್ಳಿಗಳಲ್ಲಿ ಕಾಂಗ್ರೆಸ್ಸಿನ ಸಂದೇಶವು ಮನೆಯನ್ನು ತೂರಿ ಮನೆಮುಂದಿಯಲ್ಲಿ ಮನೆಮಾಡಿ ಕೊಂಡಿತು. ಜೂಜಿನ ಕುದುರೆಯ ಬೆನ್ನಿಗೆ ಚಾಟಿ ಏಟು ಬಿದ್ದಂ ತಾಗಿ ಕಾಂಗ್ರೆಸ್ಸು ಎಚ್ಚೆತ್ತುಕೊಂಡಿತು. ಈ ದೃಷ್ಟಿ ಂದಲೇ ನಮ್ಮ ಪತ್ರಿಕೆಯ ಪುಟಗಳಷ್ಟು ಕಾಂಗ್ರೆಸ್ಸಿನ ಸಂದೇಶವನ್ನು ಅಹೋರಾತ್ರಿ ಸಾರುತ್ತಿ ದ್ದವು. ನಮ್ಮ ಪತ್ರಿಕೆಯ ಸಂಪಾದಕರಾದ ಶ್ರೀ ನೆಸ್ವಿಯವರೂ ಲೋಕ ಸಭೆಗೆ ಕಾಂಗ್ರೆಸ್ಸ ಉಮೇದವಾರರಾಗಿದ್ದುದರಿಂದ ಅವರ ಸಲುವಾಗಿ ಇಷ್ಟೊಂದು ಪ್ರಚಾರವೆಂಬ ಟೀಕೆಗೆ ಪತ್ರಿಕೆ ಗುರಿಯಾದರೂ ವಿಚಾರಪರರಾಗಿ ರಾಷ್ಟ್ರೀಯ ದೃಷ್ಟಿಯಿಂದ ನೋಡುವವರಿಗೆ ಈ ಪ್ರಚಾರದ ವಿಶಾಲದೃಷ್ಟಿ ಗೊತ್ತಾಗುವುದು. ಶ್ರೀ ನೆಸ್ವಿಯವರು ತಮ್ಮ ಎದುರಾಳಿಯಾದ ಪ್ರಜಾ ಪಕ್ಷದ ಜೀವನಾಡಿಯಾದ ಶ್ರೀ ಹೊಸಮನಿ ಸಿದ್ದಪ್ಪನವರನ್ನು ಸೋಲಿಸು ವುದಕ್ಕೆ ಪ್ರಚಾರದ ಅವಶ್ಯಕತೆಯಿರಲಿಲ್ಲ. ಏಕೆಂದರೆ ಅವರು ಚುನಾವಣೆ ಗಾಗಿ ಕಾಂಗ್ರೆಸ್ಸು ಸೇರಿದವರಲ್ಲ. ಕಾಂಗ್ರೆಸ್ಸು ಅಧಿಕಾರಕ್ಕೆ ಬರುವುದೆಂಬ ಬಯಕೆಯಿಂದ ಕಾಂಗ್ರೆಸ್ಸಿಗೆ ಬಂದವರಲ್ಲ. ಕಾಂಗ್ರೆಸ್ಸಿನ ಕಾರ್ಯಕರ್ತ ನಾಗಿ ನಿಲ್ಲುವುದು ಜೀವನ ಮರಣ ಪ್ರಶ್ನೆಯಾಗಿದ್ದಾಗ ಬ್ರಿಟಿಷರ ಗುಂಡಿನ ಕಾರಭಾರವಿದ್ದಾಗ ಚಳುವಳಿಯಲ್ಲಿ ಧುಮುಕಿ ನಿಮಿಷ ನಿಮಿಷಕ್ಕೂ ಜೀವ

ವನ್ನು ಪಣವಾಗಿಟ್ಟು ಸ್ವಾತಂತ್ರ್ಯವನ್ನು ಸಂಪಾದಿಸಿದ ದೇಶವೀರರು ಅವರೆಂಬುದನ್ನು ಕರ್ನಾಟಕವೆಲ್ಲವೂ ಚೆನ್ನಾಗಿ ತಿಳಿದಿರುವಾಗ ಅವರನ್ನು ತಮ್ಮ ಪ್ರತಿನಿಧಿಯಾಗಿ ಒಪ್ಪಿಕೊಳ್ಳುವುದು ಹೊಸದಲ್ಲ. ಈ ಹಿಂದೆ ನಡೆದ ಚುನಾವಣೆಗಳಲ್ಲಿ ಅವರನ್ನು ಆರಿಸಿತಂದ ಕರ್ನಾಟಕಕ್ಕೆ ಅವರ ಬಗ್ಗೆ ಅವರ ಪತ್ರಿಕೆಯು ಹೇಳಿಕೊಳ್ಳಬೇಕಾದ ಅವಶ್ಯಕತೆಯಿರಲಿಲ್ಲ.

ಹೋಗಲಿ, ಕರ್ನಾಟಕದ ರಾಜಕಾರಣವೇಕೆ ನನ್ನ ನಿನ್ನ ಈ ಪತ್ರವ್ಯವಹಾರದಲ್ಲಿ ಬರಬೇಕು? ಒಂದನ್ನು ಮಾತ್ರ ಈ ಸಂದರ್ಭದಲ್ಲಿ ಬರೆಯಲೇ ಬೇಕಾಗಿದೆ. ಅದು ಜವಾಹರಲಾಲರು ಹುಬ್ಬಳ್ಳಿಗೆ ಬಂದು ಹೋದ ವಿಷಯ ಈಗಲೇ ಬರೆಯಬೇಕೆಂದಿದ್ದೆನು. ಈ ಪತ್ರ ಉದ್ದವಾಗುವುದೆಂಬ ಭಯದಿಂದ ಇನ್ನೆಂದಾದರೂ ಅದನ್ನೆಲ್ಲ ಬರೆಯುವೆನು. ಸದ್ಯಕ್ಕೆ ನಿನಗೆ ಈಗ ಯಾವ ಬಗೆಯ ಪತ್ರಗಳು ಬೇಕು, ತಿಳಿಸು.

ಇತಿನಿನ್ನ "ಹೆಣ್ಣಿನ ಹೃದಯದವ"

x x x x

## [೧೯]

ಪೂರ್ಣಿಮೆಯು,

ಪೂರ್ಣಿಮಾ,

ಇಂದು ನಿನಗೆ ಪತ್ರಬರೆಯುವ ಸರದಿ ಇನ್ನೂ ಬಂದಿಲ್ಲ. ನಾನು ಎರಡು ದಿನಗಳಹಿಂದೆ ಬರೆದ ಪತ್ರಕ್ಕೆ ಇನ್ನೂ ಉತ್ತರವೇ ನಿನ್ನಿಂದ ಬಂದಿಲ್ಲ. ಆದರೂ ಇಂದು ಬಂದ ಟಪಾಲಿನಲ್ಲಿ ಪತ್ರಿಕಾಲಯಕ್ಕೆಂದು ಪಾಂಡಿಚೇರಿಯ ಆಶ್ರಮದಿಂದ ಶ್ರೀ ತಾಯಿಯವರ ಸಂದೇಶವೊಂದು ಬಂದಿತು. ಅದನ್ನು ಆದರದಿಂದ ಓದಿದೆ. ಆಗ ಭಕ್ತಿಯಿಂದ ಉಕ್ಕಿಬಂದ ಭಾವನೆಗಳನ್ನು ತಡೆಯಲಾಗಲಿಲ್ಲ. ಆದ್ದರಿಂದ 'ಲೆಟರಪ್ಯಾಡ'ನ್ನು ಮುಂದಿಟ್ಟುಕೊಂಡು ಬರೆಯಲು ಆರಂಭಿಸಿದ್ದೇನೆ.

ಮಾತೆಯವರ ಸಂದೇಶವು, ಅಲ್ಲ ಮಹರ್ಷಿ ಅಮರ ಅರವಿಂದರಲ್ಲಿ ನಿವೇದಿಸಿಕೊಂಡಿರುವ ನಿವೇದನವು ಇಂತಿದೆ. "Oh lord thou hast decided to test the quality of our faith and to pass our sincerity on thy touch-stone. Grant that we come out greater and purer from the ordeal........The Mother." "(ಓ ಪ್ರಭು, ನಮ್ಮ ಶ್ರದ್ಧೆಯ ಸತ್ತ್ವವನ್ನು ಪರುಕಿಸಲು ಹಾಗು ನಮ್ಮ ನಿಷ್ಠೆಯನ್ನು ನಿನ್ನ ನಿಕ ಶಕ್ಕೆ ತಿಕ್ಕಿ ನೋಡಲು ನೀನು ನಿಶ್ಚಯಿಸಿರುವೆ. ಈ ಸತ್ವಪರೀಕ್ಷೆ ಯಲ್ಲಿ ನಾವು ಅಧಿಕಾಧಿಕ ಪಾವನರಾಗಿ ಅಧಿಕಾಧಿಕ ಘನತೆಯಿಂದ ಹೊರಬರುವಂತೆ ಅನುಗ್ರಹಿಸು— ಮಾತುಶ್ರೀ")

ಮಾತೆಯವರು ಯಾರು,ಪಾಂಡಿಚೆರಿಯ ಅರವಿಂದಾಶ್ರಮ ಯಾವುದು ಇದನ್ನು ನೀನೇನು ಹೊಸದಾಗಿ ತಿಳಿದುಕೊಳ್ಳಬೇಕಾಗಿಲ್ಲ. ಅತಿ ಮಾನಸ ತೇಜಸ್ಸನ್ನು ಈಭೌತಿಕ ದೇಹದಲ್ಲಿ ತುಂಬಿತೋರಿಸಿದ ಮಹರ್ಷಿ ಅರವಿಂದರ ಬಗ್ಗೆ, ಅವರ ದೇಹಾಂತ್ಯದ ಕಾಲಕ್ಕೆ ಪಾಂಡಿಚೆರಿಗೆ ಹೋಗಿ ಬಂದು, ಘಂಟೆ ಗಟ್ಟಲೆ ನಾನು ಹೇಳಿದುದೆಲ್ಲವನ್ನೂ ಗಟ್ಟಿಯಾಗಿ ಉಸಿರು ಬಿಡದೆ ನೀನು ಕೇಳಿರುವೆ. ಪಾಂಡಿಚೆರಿಗೆ ಹೋಗಿಬಂದು ಮಾತೆಯ ವರ ದಿವ್ಯದರ್ಶನ ನನಗೆ ಆಗದಿದ್ದುದಕ್ಕಾಗಿ ನನ್ನ ಭಾಗ್ಯವನ್ನು ನೀನು ಮೂದಲಿಸಿದೆಯಲ್ಲವೆ? ಅರವಿಂದರ ಭೌತಿಕ ದೇಹದಲ್ಲಿ ಪ್ರಜ್ವಲಿಸುತ್ತಿದ್ದ ಆ ಅತಿಮಾನವ ತೇಜವನ್ನು ಮಾತೆಯವರು ಏಕಾಂತದಲ್ಲಿ ಕುಳಿತು ಆಸ್ವಾ ದಿಸಿಕೊಳ್ಳುತ್ತಿದ್ದರು, ಅರವಿಂದರ ಆತ್ಮ ಜ್ಯೋತಿಯು ಅವರಲ್ಲಿ ಆವಿರ್ಭವಿಸುತಿ ದ್ದಿತು. ಯಾರಿಗೂ ದರ್ಶನವಿರಲಿಲ್ಲ. ಮಾತೆಯವರು ಏಕಾಂತವಾಗಿದ ಆ ಕೊಠಡಿಯನ್ನೇ ತಿರುತಿರುಗಿ ನೋಡಿಕೊಂಡು, ಪುಣ್ಯವಿದ್ದರೆ ಮತ್ತೆ ಬರುವೆನು ಎಂದಂದುಕೊಂಡು ಬಂದೆನು. ಪುಣ್ಯ, ಸಂಸ್ಕಾರ ಇವುಗಳೇ ಮಾನವ ಜೀವನವನ್ನು ಸಂಸ್ಕರಿಸುವ ಸಂಪತ್ತು. ಇವು ನನ್ನಲ್ಲಿ ಇರು ವುದೆಂದು ನಿನ್ನ ಮುಂದೆ ಹೇಳಿಕೊಳ್ಳಲು ಹಿಂಜರಿಯಬೇಕೇ? ಎಷ್ಟಾ ದರೂ ಕೂಡಿದವರಿಗೆ ಕೋಡಗ ಮುದ್ದು ಎಂಬಂತೆ ನಿನಗೆ ನಾನೇ ಇಂಪ್ರ

ಚಂದ್ರ. ನನ್ನ ಮಾತಿಗೆ ಉಳಿದವರು ಬೆಲೆ ಕೊಡಲಿ ಕೊಡದಿರಲಿ ನೀನಂತೂ ಕೊಡುವೆಯೆಂದು ಹಿಂದು ಮುಂದು ನೋಡದೆ ತೋಚಿದ್ದನ್ನೆಲ್ಲಾ ಬರೆ ಯುತ್ತಿರುವೆನು.

ಮಾತೆಯವರು ಮಹರ್ಷಿ ಅರವಿಂದರಲ್ಲಿ ನಿವೇದಿಸಿರುವ ಮಾತುಗ ಳೆಷ್ಟು ಮನನೀಯವಾಗಿವೆ? ಪರೀಕ್ಷಿಸುವ ಪ್ರಭುವಿಗೆ ಪರೀಕ್ಷೆಯಲ್ಲಿ ಯಶ ಸ್ವಿಯಾಗುವಂತಹ ಶಕ್ತಿಯನ್ನು ಅನುಗ್ರಹಿಸುವಂತೆ ಕೇಳಿಕೊಳ್ಳುವ ಮಾತಿ ನಲ್ಲಿ ಎಂತಹ ಅನನ್ಯ ಶರಣತ್ವವಿದೆ? ನಾನು ಮಂತ್ರಾಲಯಕ್ಕೆ ಹೋದಾಗ ಮಂತ್ರಸಿದ್ಧರಾದ ಯೋಗಿವರೇಣ್ಯರಾದ ಶ್ರೀ ರಾಘವೇಂದ್ರಯತಿಗಳ ಬೃಂದಾ ವನದ ಮುಂದೆ ನಿಂತು ನಮಿಸಿದಾಗ, ತನಗೆ ತಾವೇ ನನ್ನ ಬಾಯಿ ಯಿಂದ,

"ಜೀವನದ ಸ್ವಮಸ್ಯೆಗಳನಿತುಮಂ
ಭಾವಶುದ್ಧಿಯಲಿ ನಿನಗೊಪ್ಪಿಸಿಹೆನು
ಕಾವಭಾರವನು ನಿನ್ನಮಲಚಿತ್ತಕೆ ಬಿಡುತಿಹೆನು"

ಎಂದು ಶರಣತ್ವದ ಹಾಡು ಹೊರಹೊಮ್ಮಿತು. ಆದರೆ ಅಂದು ಪ್ರಾಕೃತ ಪ್ರಾರಬ್ಧದ ಬಾಧೆಗಳಿಗೆ ಬಸವಳಿದು ಬೆಂಡಾಗಿ ಬಡತನದ ಕಷ್ಟ ಗಳ ಸಮುದ್ರದಲ್ಲಿ ಮುಳುಗಿ ಹೋಗಿದ್ದಾಗ ಹುಟ್ಟಿ ಬಂದ ವೈರಾಗ್ಯ ಮಾತ್ರ ನನ್ನಲ್ಲಿತ್ತು. ಭಯಪೀಡಿತನಾಗಿ ಕೋಟಲೆಗಳ ಕಾಟಕ್ಕೆ ಹೆದರಿ

"ಅವಬಾಧೆಯು ಎನಗೀಯದೆ
ನೋವತಪ್ಪಿಸಿ ಕಾವುದೆಂದು
ದೇವಗುರು ನಿನ್ನ ನೊಂದಿಸಲು ಬಂದಿಹೆನಯ್ಯ
ಸಿದ್ಧಗುರು ಶ್ರೀ. ರಾಘವೇಂದ್ರ"

ಎಂದು ಬೇಡಿಕೊಂಡಿದ್ದೆನು.

ಈಗ ಐದು ವರ್ಷಗಳನಂತರದಲ್ಲಿ ಕಾಯಕದ ಕುಲುಮೆಯಲ್ಲಿ ಬೆಂದು ಸಾಧನೆಯ ಸುತ್ತಿಗೆಯಿಂದ ಪೆಟ್ಟು ತಿನ್ನತೊಡಗಿದ ನಂತರ ಗುರುದೇವನನ್ನು ಕೇಳುತ್ತಿರುವುದೇನು ಗೊತ್ತೇ ?

"ಶೋಕಕಂಜೆನು ನಾನು
ಲೋಕಕಳುಕೆನು ನಾನು
ನಾಕ ನರಕಗಳೆಲ್ಲ ನಿಮ್ಮ ಮಮತೆ ಮುನಿಸಿನಲಿ"

ಎನ್ನುತ್ತಿರುವೆನಲ್ಲದೆ "ಭೋಗವೆಲ್ಲ ಹೋಗಿ ಬಿಡಲಿ! ಯೋಗಪುರುಷ ರಾಘವೇಂದ್ರರ ದಯವೊಂದಿರಲಿ" ಎಂದು ಕೇಳುತ್ತಿರುವೆನು. ನನಗೆ ಗೊತ್ತು. ಪೂರ್ಣೆ, ಇದಿಷ್ಟೇ ಗುರುರಾಯರ ಕೃಪೆಯನ್ನು ಪಡೆಯಲು ಸಾಲದೆಂಬುದು. ಅವರು ಮಾಡುವುದು ಯಾವಾಗಲೂ ಅಗ್ನಿಪರೀಕ್ಷೆಯೆ. ನಾನು ಕೇಳಿಕೊಳ್ಳುತ್ತಿರುವುದರಲ್ಲಿ ಶ್ರೀ. ರಾಘವೇಂದ್ರರ ಕೃಪೆಯನ್ನು ಆಶಿಸುತ್ತಿರುವುದರಲ್ಲಿ ನನ್ನ ಕೌಟುಂಬಿಕ ಸಮೃದ್ಧಿ, ನನ್ನ ಐಹಿಕ ಜೀವನದ ಆರಾಮ ಇದರ ಸ್ವರವಿದೆ. ಈ ದೋಷವು ನನ್ನಲ್ಲಿ ಹೋಗುವವರೆಗೆ ರಾಯರ ಕೃಪೆಯ ಮೇಲೆ ನನಗೇನು ಹಕ್ಕು? ಇಷ್ಟೆಲ್ಲವೂ ಒಮ್ಮೆಲೇ ಸಾಧಿಸಲಸಾಧ್ಯವೆಂದು ನಾನು ತಿಳಿದುಕೊಂಡಿದ್ದರಿಂದಲೇ ರಾಯರ ಸಿರಿಚರಣದಲ್ಲಿ ಶರಣು ಶರಣು ಎನ್ನುವ ಸುಲಭೋಪಾಯವನ್ನು ನಾನು ಅನುಸರಿಸುವೆನು. ಆದರೂ ಒಮ್ಮೊಮ್ಮೆ ಲೋಕದ ಹೊಗಳಿಕೆಗೆ ಉಬ್ಬುವ ಮತ್ತು ಹೊಗಳಿಕೆಯನ್ನು ಬಯಸುವ ದೌರ್ಬಲ್ಯವು ನನ್ನೆದೆಯಲ್ಲಿ ಮೂಡಿದಾಗ, ನಾನು ಮಾಡಿದೆನು, ನಾನು ಮಾಡುತ್ತಿರುವೆನು, ನಾನು ಮಾಡಬಲ್ಲೆನು ಎಂಬ ನಾನತ್ವವು ತಲೆಯಲ್ಲಿ ತುಂಬತೊಡಗುವದು. ಆಗ ನನಗೆ ನನ್ನ ಅನನ್ಯ ಶರಣತ್ವದಲ್ಲಿ "ಸಂಕಟ ಬಂದಾಗ ವೆಂಕಟರಮಣ" ಎನ್ನುವ ಉದರವೈರಾಗ್ಯವಿದೆಯೆ ಎಂದೆನಿಸುವುದು ಇಂತಹ ತುಯ್ಯದಾಟದಲ್ಲಿ ನನ್ನ ಭಕ್ತಿ, ನನ್ನ ನಿವೇದನೆ, ಶ್ರದ್ಧೆ, ಆತ್ಮವಿಶ್ವಾಸ ಇವು ಅತ್ತಲಿತ್ತ ತೂಗಿ ತೊನೆಯುತ್ತಿರುವಾಗ ಮಾತೆಯವರ ನಿವೇದನದ ಉಕ್ತಿಯು ನನ್ನ ನಾಡಿ ನರಗಳಲ್ಲಿ ಯಾವುದೋ ಹೊಸ ಚೇತನವನ್ನು ತುಂಬಿ ನಿನಗೆ ಪತ್ರ ಬರೆಸುತ್ತಿದೆ.

ಸತ್ವ ಪರೀಕ್ಷೆಯು ಮಾನವನ ಜೀವನದ ಉದ್ದಕ್ಕೂ ಇದ್ದೇ ಇದೆ. ಶ್ರದ್ಧೆ ಬಾಳಿನ ಉಸಿರು, ನಿಷ್ಠೆಯ ಜೀವಾಳ, ಸಾಧನೆಯ ಶಕ್ತಿ, ಇದನ್ನು ಒರೆಗೆ ಹಚ್ಚಿದಾಗ ಬಂಗಾರದ ಬಣ್ಣ ತೇಲಿದರೆ ಆಗ ಜೀವನು ಮುಮುಕ್ಷುವಾಗುವನು. ಮುಮುಕ್ಷು ಮೋಕ್ಷೇಚ್ಛುಯೆಂದರ್ಥ. ಶ್ರೀ ಅರ-

ವಿಂದರ ವೇದಾಂತದಲ್ಲಿ ಮೋಕ್ಷವೆಂದರೆ, ಅಮೃತವನ್ನು ಕುಡಿದು ಅಮರರಾಗಿ ದೇವಲೋಕದಲ್ಲಿ ದೇವತೆಗಳಾಗಿ ಅಲ್ಲಿ, ಜೀವಿಸುವುದಲ್ಲ. ಇದೇ ಜೀವನದಲ್ಲಿ, ಇದೇ ದೇಹದಲ್ಲಿ, ಇದೇ ಉಸುರಿನಲ್ಲಿ ದಿವ್ಯ ಜೀವನವನ್ನು ಪಡೆಯುವುದಕ್ಕೇ ಶ್ರೀ ಅರವಿಂದರು ಮೋಕ್ಷವೆನ್ನುವರು. ಮಲದ ಕೂಪವಿದೆಂದು ದೇಹವನ್ನು ಶೋಷಿಸುವ, ಶಿಕ್ಷಿಸುವ, ವೈರಾಗ್ಯಕ್ಕೆ, ಅರವಿಂದರ ವೇದಾಂತದಲ್ಲಿ ಜಾಗವಿಲ್ಲ. ದೇಹವೇ ಮೋಕ್ಷಸಾಧನೆಯ ಮಂಟಪವೆಂಬುದು ಅವರ ಸಿದ್ಧಾಂತ. ದೇಹಧಾರಿಯಾದ ಜೀವನು ದೇಹಧಾರಿಯಾಗಿಯೇ ಜೀವಾತ್ಮವಾಗುವುದೇ ಅರವಿಂದ ಸಾಧನೆ, ಅರವಿಂದ ಸಿದ್ಧಿ, ಅರವಿಂದ ಯೋಗ, ಅರವಿಂದ ಶಕ್ತಿ.

ನಿಸರ್ಗವು ಮಾನವನ ಆಮೋದ ಪ್ರಮೋದಗಳಿಗಾಗಿ ಸೃಷ್ಟಿಸಿರುವ ಎಲ್ಲ ವಸ್ತುಗಳನ್ನೂ ಅವನು ಉಪಯೋಗಿಸಬೇಕು, ಎಂದು ಹೇಳುವಾಗ ಹಾವಿನೊಡನೆ ಸರಸವಾಡಿರಿ, ಆದರೆ ಅದರ ಹಲ್ಲನ್ನು ಕಿತ್ತು ಅದರೊಂದಿಗೆ ಸರಸವಾಡಿರಿ ಎಂಬ ಎಚ್ಚರಿಕೆ ಇದರಲ್ಲಿರುವುದು. ವಿಷಯಗಳ ದಾಸ ನೀನಾಗದಿದ್ದರೆ ವಿಷಯಗಳು ನಿನ್ನ ಕಾಲಕೆಳಗಿನ ತೊತ್ತಿನಂತಿದ್ದರೆ ಆಗ ಅವುಗಳನ್ನು ಸ್ವೀಕರಿಸುವುದರಲ್ಲಿ ದೋಷವಿಲ್ಲ, ಎಂದೆನ್ನುವ ಉಪನಿಷತ್ ಸಾರವೇ ಅರವಿಂದ ಜೀವನದ ಸಿದ್ಧಿ, ಎಂಬ ನಂಬಿಗೆಯಿಂದ ನಾನು ವಿಷಯಗಳಲ್ಲಿನ ವಿಷವನ್ನು ತೆಗೆಯಲೆತ್ನಿಸಿರುವೆನು. ಈ ಸಾಧನೆಯ ಹಾದಿಯಲ್ಲಿ ಮುಗ್ಗರಿಸುವುದೇ ಆಗಿದೆ. ಆದುದರಿಂದ ನಾನು ಈ ಸತ್ಯಪರೀಕ್ಷೆಯಲ್ಲಿ "ಅಧಿಕಾಧಿಕ ಪಾವನನಾಗಿ ಅಧಿಕಾಧಿಕ ಘನತೆಯಿಂದ ಹೊರಬರುವಂತೆ ಅನುಗ್ರಹಿಸು" ಎಂದು ಗುರುರಾಯರಲ್ಲಿ ಮೊರೆಯಿಡು. ನಿನ್ನ ಕೂಗು ಗುರುದೇವನ ಕಿವಿಗೆ ಬಹು ಹತ್ತಿರ. ನೀನು ನಿನಗಾಗಿ ಏನನ್ನು ಕೇಳದೆ ನನ್ನ ಸಲುವಾಗಿ ಪ್ರಾರ್ಥಿಸುತ್ತಿರುವೆಯಾದ್ದರಿಂದ ಇದರಲ್ಲಿ ಅಷ್ಟು ಸ್ವಾರ್ಥವಿಲ್ಲವೆಂದು ರಾಯರು ಬೇಗ ಅನುಗ್ರಹಿಸಿದರೂ ಅನುಗ್ರಹಿಸಬಹುದು.

ಈ ಪತ್ರವನ್ನು ಬರೆಯಲು ಪ್ರೇರೇಪಿಸಿದ ಮಾತೆಯ ಉಕ್ತಿಯಲ್ಲಿರುವ ಶಕ್ತಿಗೂ ತಲೆ ಬಾಗಿ ನಮಿಸು. ಜಗದಾದಿಶಕ್ತಿಯೇ ಅರವಿಂದಾಶ್ರಮದ ಮಾತೆಯೆಂಬುದು ನನ್ನ ಸ್ವಂತ ವಿಶ್ವಾಸ. ಆ ಶಕ್ತಿಯು ಸಾಕಾರ

ಸುಂದರ ರೂಪವನ್ನು ನೋಡುವ ಭಾಗ್ಯವು ನನಗೂ, ನಿನಗೂ ಜೊತೆಯಲ್ಲಿಯೇ ದೊರೆಯಲೆಂದು ಹಾರೈಸುವೆನು.

ನಿನ್ನ ಉತ್ತರ ಬರುವ ವರೆಗೂ ನಾನು ಪತ್ರ ಬರೆಯುವುದಿಲ್ಲ. ಈ ಸಾರಿ ಅದೇಕೋ ನಿನ್ನಿಂದ ಏನೋ ಹೊಸದನ್ನು ಆಶಿಸುತ್ತಿರುವೆನು. ಅದೇನು ಮಹಾರಾಯತಿ ಆ ಹೊಸದು? ಆಳಿಸುವುದನ್ನು ಬರೆಯಬೇಡ. ಅರಳಿಸುವುದನ್ನು ಬೇಕಾದಷ್ಟನ್ನು ಬರೆ. ನೀನೇ ಅಂದಿರುವೆ ನನ್ನದು ಹೆಣ್ಣಿನ ಹೃದಯವೆಂದು.

ಇತಿ ನಿನ್ನ ಉತ್ತರಾಭಿಲಾಷಿ

x x x x

## [೨೦]

### ಪೂರ್ಣಿಮೆಯ ಪತ್ರ

ಹೃದಯೇಶ್ವರರ ಹೃದಯಾರವಿಂದಕ್ಕೆ ಭಕ್ತಿಪೂರ್ವಕ ನಮಸ್ಕಾರಗಳು.

ಮಕ್ಕಳಾದಿಯಾಗಿ ಎಲ್ಲರೂ ಕ್ಷೇಮವಾಗಿದ್ದಾರೆ. ನಿಮ್ಮ ರಾಘು ಈಗೀಗ ನಡೆಯಲು ಆರಂಭಿಸಿದ್ದಾನೆ. ಅವನ ಜೀವದ ಮೇಲೆ ಬಂದಿದ್ದ ಗಂಡಾಂತರ ಶ್ರೀ ರಾಘವೇಂದ್ರ ಸ್ವಾಮಿಗಳ ದಯೆಯಿಂದ ತಪ್ಪಿತು. ನೀವು ನಿಮ್ಮ ಪತ್ರಗಳಲ್ಲಿ ಗುರುರಾಯರ ಅನುಗ್ರಹವಿದೆಯೋ ಇಲ್ಲವೋ ಎಂದು ಸಂದೇಹಪಡುವಂತಿದೆ. ಆದರೆ ನನಗೆ ಆ ಸಂದೇಹ ಸ್ವಲ್ಪವೂ ಇಲ್ಲ. ಕೈಬಿಟ್ಟು ಹೋಗಿದ್ದ ನನ್ನ ರಾಘುವನ್ನು ನನಗೆ ಪುನಃ ಕೊಟ್ಟು ರಾಘವೇಂದ್ರ ಸ್ವಾಮಿಗಳ ಅನುಗ್ರಹವು ನಮ್ಮ ಮೇಲೆ ಸಂಪೂರ್ಣವಾಗಿದೆಯೆಂದು ನಾನೇನೋ ನಂಬಿದ್ದೇನೆ ನೀವೂ ನಂಬಿರಿ. "ನಂಬುಗೆಯೇ ಕಾರಣವು ಶಂಭುವಿನೊಲುಮೆಗೆ" ಎಂಬುದನ್ನು ಮರೆತಿರೇನು ?

ರಾಘು ದಿನಕ್ಕೆ ನೂರು ಸಾರಿಯಾದರೂ ಅಮ್ಮ ಅಮ್ಮ ಎನ್ನುವನು. ವಾರಕ್ಕೆ ಒಂದು ಸಾರಿ ಮಾತ್ರ ಅಪ್ಪ ಎನ್ನುವನು. ಕಣ್ಣೆದುರಿಗೆ ಇಲ್ಲದವ

ರನ್ನು ಕನವರಿಸಿಕೊಂಡು ಕರೆಯುವುದಕ್ಕೆ ಅವನಿಗಿನ್ನೂ ವಯಸ್ಸು ಸಾಲದು ಅಲ್ಲವೇ ?

ನೀವು ಮೊನ್ನೆ ಬಸವನಾಳರ ಬಗ್ಗೆ ಬರೆದ ಪತ್ರವನ್ನು ಓದಿದಾಗ ನನ್ನ ಹೃದಯ ಕಲುಕಿಹೋಯಿತು. ಬಸವನಾಳರಿಗೆ ಕುಳಿತಲ್ಲಿಂದಲೇ ನಮಿಸಿದೆ. ಕಣ್ಣುಮುಚ್ಚಿ ಅಂಬಿಕಾತನಯದತ್ತರನ್ನೇ ನೆನೆಸಿಕೊಂಡೆ. ಧಾರವಾಡದ ಬೀದಿ ಬೀದಿಗಳನ್ನು ಸ್ಮರಿಸಿಕೊಂಡೆ; ಸಮಾಧಾನ ಬರಲಿಲ್ಲ. ಮತ್ತೊಮ್ಮೆ ಅದೇ ಪತ್ರವನ್ನು ಓದಿದೆ. ಏಕೋ, ಏನೋ ಸಾವು ಬಹು ಕರ್ಕಶವಾಗಿ ಕಂಡುಬಂತು. ಅಂದು ನನ್ನ ಸ್ಕೂಲಿಗೆ ರಜೆ. ಬಿಡುವು ಬೇಕಷ್ಟಿದ್ದಿತು. ಆ ಕಲಿಯುವ ಮಕ್ಕಳ ಮಧ್ಯೆ ತಲೆಹೊಡೆದುಕೊಂಡು ಪುಗ್ಗಿ ಹೇಳಿಸಿ ಲೆಕ್ಕ ಹಾಕಿಸಿ ಸುಸ್ತಾಗುವ ನಮ್ಮಂತಹ 'ಮೇಡಂ'ಗಳಿಗೆ ವಾರಕ್ಕೊಂದು ದಿನ ರಜೆ ಸಾಲದು. ಏಕೆಂದರೆ ನಾನು ಶಾಲೆಯಲ್ಲಿ ಉಪಾಧ್ಯಾಯನಿ. ಮನೆಯಲ್ಲಿ ಕೆಲಸದವಳು. ಮಕ್ಕಳಿಗೆ ತಾಯಿ. ಇದರ ಜತೆಗೆ ನಿಮಗೆ ಉದ್ದುದ್ದ ಪತ್ರ ಗಳನ್ನೂ ಬರೆಯಬೇಕು. ನಡುವೆ ರಾಘುವಿನೊಂದಿಗೆ ಆಟವಾಡಲು ಸಮ ಯವೇ ಸಾಲದು. ಆ ಮುದ್ದಿನ ಮೂಷೆ ನಿಮ್ಮ ಮುದ್ದಿನ ಮುದ್ದೆ ಲೀಲಾ ಸತ್ತುಹೋದ ನಿಮ್ಮ ಸೋದರತ್ತೆ ಸಾಕಮ್ಮಯ್ಯನ ಅಪರಾವತಾರವೇ ಸರಿ. ಸಿಡುಕೆಂದರೆ ಸಿಡುಕು. ಅವಳು ನನ್ನ ಮಗಳೇನಲ್ಲ. ನಿಮ್ಮ ಸ್ವಂತ ಮಗಳು. ನೀವು ಒಂದೊಂದು ಸಾರಿ ಅವಳಿಗೆ ಹೇಳಿಕೊಡುತ್ತಿದ್ದಿರಿ, ನಾನು ಅವಳ ಮಲತಾಯಿಯೆಂದು. ಎಲ್ಲೋ ಆ ಪೆದ್ದು ಹುಡುಗಿ ಅದನ್ನೇ ನಿಜವೆಂದು ತಿಳಿದುಕೊಂಡಂತಿದೆ. ಅವಳಿಗೆ ಸಿಟ್ಟು ಬಂದಿತೆಂದರೆ ಅವಳ ಮುಖ ನೋಡಲು ನನಗೇ ಭಯ. ಹೈಸ್ಕೂಲಿನಲ್ಲಿ ಓದುತ್ತಿರುವಳು. ಮುಂದಿನ ವರುಷ ಮ್ಯಾಟ್ರಿಕ್ ಪ್ಯಾಸಾಗುವಳು, ಆದರೂ ಒಂದಿಷ್ಟೂ ಚುರುಕಿಲ್ಲ. ಚುರುಕಿ ಲ್ಲದಿದ್ದರೂ ಹೋಗಲಿ ಸಿಡುಕೇಕೆ ಅಷ್ಟು ? ಹೋ, ಹೋ, ಮರೆತಿದ್ದೆ. ಅವಳ ಸುದ್ದಿ ಎತ್ತಿದರೆ ನಿಮಗೆ ಕೋಪ ಮೂಗಿನ ಕೊನೆಗೇ ಬಂದು ಬಿಡು ವುದು. ಇರಲಿ, ನೀವಿರುವುದು ಹುಬ್ಬಳ್ಳಿ, ನಾನಿರುವುದು ಬೆಂಗಳೂರು; ಸಿಟ್ಟು ಬಂದರೂ ಕಾಫಿಯ ಮೇಲೆ ತೋರಿಸಬೇಕು ಅಷ್ಟೆ, ಹೋಗಲಿ ಆ ವಿಷಯ.

ನಿನ್ನ ಮನಸ್ಸಿನ ಸಮಾಧಾನಕ್ಕೆ ಏನೂ ಉಪಾಯವೇ ಕಾಣುವುದಿಲ್ಲ. ಕೊನೆಗೆ ನೀವು ನನಗೆ ಬರೆದಿರುವ ಪತ್ರಗಳ ಫೈಲನ್ನು ತೆಗೆದುಕೊಂಡು

ಓದುತ್ತಾ ಕುಳಿತೆನು, ಅವುಗಳನ್ನೆಲ್ಲಾ ಒಮ್ಮೆ ವಿಮರ್ಶೆ ಮಾಡಿಬಿಡಲೇ ಎಂದು ಹುಮ್ಮಸ್ಸು ಬಂದಿತು. ಈ ಯೋಚನೆಗೆ ನನಗೇ ನಾಚಿಕೆಯಾಗಿ ಸೆರಗನ್ನು ಸರಿಮಾಡಿಕೊಂಡೆನು. ಕನ್ನಡಿಯಲ್ಲಿ ಮುಖವನ್ನು ನೋಡಿಕೊಂಡು ನಕ್ಕೆನು. ಆದರೂ ಒಂದು ಮಾತ್ರ ಮನಸ್ಸಿಗೆ ಹೊಳೆಯದೇ ಇರಲಿಲ್ಲ. ನೀವು ನನಗೆ ಧೈರ್ಯ ತುಂಬುತ್ತಿದ್ದರೂ ನಿಮ್ಮ ಧೈರ್ಯವನ್ನೇ ನೀವು ಕಳೆದು ಕೊಳ್ಳುತ್ತಿರುವಿರಿ. ಈ ಗುಟ್ಟು ರಟ್ಟಾದುದು ಎಲ್ಲಿ ಗೊತ್ತೆ? ನನ್ನ ಮತ್ತು ನಿಮ್ಮ ಅಗಲಿಕೆಯ ನೆನಹು ಬಂದಾಗ. ಹೆಚ್ಚುಕಡಿಮೆ ಪ್ರತಿ ಪತ್ರದಲ್ಲೂ ಈ ನೋವನ್ನು ಒಂದಲ್ಲ ಒಂದು ವಿಧದಲ್ಲಿ ತುಂಬಿರುವಿರಿ. ಒಂದು ಸಾರಿಯಾದರೂ ಗಟ್ಟಿಮನಸ್ಸು ಮಾಡಿಕೊಂಡು ಅಗಲಿಕೆಗಾಗಿ ಸಮಾಧಾನವನ್ನು ತಂದುಕೊಂಡಿಲ್ಲ. ಇಂತಹ ಅರೆಮನಸ್ಸಿನಲ್ಲಿ ನೀವಲ್ಲಿ ದುಡಿವ ದುಡಿತದಿಂದ ಬರಿಯ ದೇಹಶ್ರಮ ಮಾತ್ರವಾಗುವುದಾದರೆ ಪ್ರಯೋಜನವೇನು? ನಿಮ್ಮ ಸಂಪಾದನೆಗಾಗಿ ನಿಮ್ಮನ್ನು ಅಲ್ಲಿ ಬಿಟ್ಟಿಲ್ಲ. ನನಗೆ ಬಡತನ, ಬಹು ಬಡತನವನ್ನು ಅನುಭವಿಸುವುದು ತಿಳಿಯದಿಲ್ಲ. ನನ್ನ ಮತ್ತು ಮಕ್ಕಳ ಸಲುವಾಗಿ, ನಮ್ಮ ಹೊಟ್ಟೆ ಬಟ್ಟೆಗಾಗಿಯೇ ದುಡಿಯುವುದಿದ್ದರೆ ಅದಕ್ಕಾಗಿಯೇ, ಮಾನ ಅಭಿಮಾನಗಳನ್ನು ಬಿಟ್ಟಿರುವಿರೆಂದೂ ಸೇವೆಯನ್ನು ಮಾರಿಕೊಂಡಿರುವಿರೆಂದು, ಲೇಖನಿಯನ್ನೂ ಒತ್ತಿ ಹಾಕಿರುವಿರೆಂದು ನಿಮಗನ್ನಿಸಿದ್ದರೆ, ಆದಕ್ಕಿಂತ ದುಃಖವಾದ ಸಂಗತಿ ಮತ್ತೊಂದಿಲ್ಲ. ಹೀಗೆ ನಾನು ಬದುಕಿದ್ದು, ನಿಮ್ಮ ಧ್ಯೇಯ ಜೀವನಕ್ಕೆ ಮುಳ್ಳಾಗುವುದಕ್ಕಿಂತ ಸತ್ತು ಅದೃಶ್ಯವಾದ ಆ ಕೈಗಳಿಂದಲೇ ನೀವು ನಡೆವ ದಾರಿಯನ್ನು ಹಸನ ಮಾಡುತ್ತ, ನಿಮ್ಮ ದಾರಿಯನ್ನು ಕಾಯುತ್ತ ಅಲ್ಲಿ ಕುಳ್ಳಿರ ಬಲ್ಲೆನು. ಆದುದರಿಂದ ಒಮ್ಮೆ ನಿರ್ಧಾರಕ್ಕೆ ಬನ್ನಿರಿ, ಗುರುದೇವರ ಸಮ್ಮುಖದಲ್ಲಿ ನಿಂತು ಪ್ರತಿಜ್ಞೆ ಮಾಡಿರಿ. ವಿರಹ, ವ್ಯಾಮೋಹ, ಇವುಗಳ ಬಿಸಿಗೆ ಕರಗುವುದಿಲ್ಲವೆಂದು ನೀವು ನನ್ನ ಮನಸ್ಸಿಗೆ ನಂಬಿಕೆ ಮಾಡಿಕೊಡಿರಿ. ಆಮೇಲೆ ನನಗೂ ನೆಮ್ಮದಿ, ನಿಮಗೂ ನೆಮ್ಮದಿ.

ಕೋಪಿಸಬೇಡಿ. ನಿಮ್ಮಲ್ಲಿ ಇತರರಿಗೆ ಬುದ್ಧಿ ಹೇಳುವುದೇ ಬಹಳವಿದೆ, ನೀವು ಹೇಳಿದ್ದನ್ನೆಲ್ಲ ಇತರರು ಕೇಳಬೇಕೆನ್ನುವಾಗ ಇನ್ನೊಬ್ಬರು ಹೇಳುವು

ದನ್ನು ಸ್ವಲ್ಪವಾದರೂ ಕೇಳುವ ಸಹನೆ, ಸೌಜನ್ಯ, ನಿಮಗೆ ಇರಬಾರದೆ. ಡಿಯರ್? ಹುಬ್ಬಳ್ಳಿಗೆ ಹೋದಮೇಲಂತೂ, ಅಬ್ಬ, ನಿಮ್ಮ ಬಾಯಿ ಅದೆಷ್ಟು ದೊಡ್ಡದಾಯಿತು? ಇಲ್ಲವಾದರೆ, ಆ ದಿನ ಪತ್ರಿಕೆಯ ನಾಲ್ಕು ಪುಟಗಳು ತುಂಬಬೇಕಲ್ಲ?

ನಿಮ್ಮೊಂದಿಗೆ ವಾದಕ್ಕೆ ನಿಲ್ಲಲಾರೆ. ನೀವು ಯಾವಾಗಲೂ ಚಂದ್ರ ನನ್ನು ಸೂರ್ಯನೆಂದು ಸಮರ್ಥಿಸಲು ಹೊರಡುವಿರಿ. ಆದ್ದರಿಂದ ಹೆಚ್ಚು ಬರೆಯುವೆ ಮಾಡಿಕೊಳ್ಳಬೇಕಾಗಿ ಪ್ರಾರ್ಥನೆಯೊಂದನ್ನು ಮಾಡಿಕೊಳ್ಳು ವೆನು. ನಡಿಸಿಕೊಡುವಿರಾ? ನನ್ನ ಅಗಲಿಕೆಯನ್ನು ತಡೆದುಕೊಳ್ಳುವ ಶಕ್ತಿ ನಿಮ್ಮಲ್ಲಿ ಇಲ್ಲದಿದ್ದರೆ ಈ ಗೊಣಗುವದೇಕೆ? ಕೊರಗೇಕೆ? ಸುಮ್ಮನೆ ಇಲ್ಲಿಗೆ ಬಂದು ಬಿಡಿ. ಆದುದಾಯಿತು. ಆದುದಾಗುವುದು, ಅಲ್ಲಿರುವುದಾ ದರೆ ಎದೆಯಲ್ಲಿ ಈ ಬಗೆಯ ನೋವಿದ್ದರೆ ಆ ಎದೆ ಉಳಿಯಬೇಕೆಂತು? ನೀವು ಮೇಲಿಂದ ಮೇಲೆ ಓದುತ್ತಲಿದ್ದ ಬಸವಣ್ಣನವರ ವಚನಾಮೃತ ವನ್ನು ಮರೆತರೇನು? ಜ್ಞಾಪಿಸುವೆನು.

“ಸಂಸಾರದಲ್ಲಿ ಹುಟ್ಟಿ, ಮತ್ತೊಂದ ಬಯಸುವೇಕಯ್ಯ? ನಗುವುದು ನುಡಿವುದು, ಶಿವಭಕ್ತರೊಡನೆ, ಸುಮ್ಮಾನಹಮ್ಮು ಬಿಮ್ಮನಿರಬೇಕಯ್ಯ.... ನಮ್ಮ ಕೂಡಲ ಸಂಗನ ಶರಣರೊಡನೆ ಮನದೆರೆದು ಮಾತನಾಡುವುದಯ್ಯಾ”

ಇನ್ನೊಂದು ವಚನ.

“ನಾಳೆ ಬಪ್ಪುದು ನಮಗಿಂದೇ ಬರಲಿ, ಇಂದು ಬಪ್ಪುದು ನಮಗೀಗಲೇ ಬರಲಿ. ಇದಕಾರಂಜುವರು? ಇದಕಾರಳುಕುವರು?”

ಮತ್ತೊಂದು

“ಆಯುಷ್ಯತೀರದಲ್ಲದೆ ಮರಣವಿಲ್ಲ. ಭಾಗ್ಯತೀರದಲ್ಲದೆ ಧಾರಿದ್ರ್ಯವಿಲ್ಲ. ಅಂಜಲೇಕೋ, ಲೋಕವಿಗರ್ಭಣೆಗೆ! ಅಳುಕಲೇಕೋ ಕೂಡಲ ಸಂಗಮದೇವ ನಿಮ್ಮಾಳಾಗಿ.”

ಬಸವಣ್ಣನವರ ಧೈರ್ಯ ಸ್ಥೈರ್ಯಗಳನ್ನು ಚಿತ್ರಿಸುವ ಈ ಮನೋಕ್ತಿಯು ನಿಮಗೆ ನಮ್ಮ ಅಗಲಿಕೆಯನ್ನು ಸಹಿಸುವ ಶಕ್ತಿಯನ್ನು ಕೊಡಲಿ. ಈ ವಿರಹದ ಅವಧಿಯಲ್ಲಿ ಪ್ರೇಮಲೋಕದ ಸಾಯುಜ್ಯಕ್ಕಾಗಿ ತಪಸ್ಸನ್ನು ಮಾಡೋಣ.

ಹೆಚ್ಚು ಬರೆದು ನಿಮ್ಮ ಕೈಯಲ್ಲಿ ಹುಚ್ಚಿ ಎನಿಸಿಕೊಳ್ಳಲಾರೆ. ತಿಳಿದವರಿಗೆ ಮತ್ತೆಷ್ಟು ಬರೆಯಲಿ? ನನ್ನ ಬರಹದಲ್ಲಿ (ನೀವು ಕಲಿಸಿದ್ದು ತಾನೆ?) ತಪ್ಪಿದ್ದರೆ ನೀವೇ ಕ್ಷಮಿಸಿಕೊಳ್ಳಿರಿ.

ಈ ತಿಂಗಳ ಕೊನೆಯಲ್ಲಿ ಬರುವೆನೆಂದು ಬರೆದಿರುವಿರಿ. ಬರುವವರೆಗೂ ಬರುವರೆಂಬ ಹುಮ್ಮಸು ಇರುವುದು. ಆದರೆ ಬಂದು ಹೋದ ಮೇಲೆ ಮತ್ತೆಷ್ಟು ದಿನಕ್ಕೆ ಬರುವರೋ ಎಂಬ ಬವಣೆ ಬಯಕೆಗೆ ಈಡಾಗುವೆನು. ಆಗ ಪುನಹ ಮೊದಲಿನಿಂದ ವ್ಯಥೆಯನ್ನು ಆರಂಭಿಸಬೇಕಾಗುವುದು. ಆದ್ದರಿಂದ ಸಾಕಾಗುವಷ್ಟು ದಿನ ತಡೆದು ಬಂದರೆ ಅಷ್ಟು ದಿನಗಳ ವರೆಗೆ ಬರುವರೆಂಬ ಭರವಸೆಯ ಮೇಲೆ ಇರುವೆನು. ಇದರ ಮೇಲೆ ನಿಮ್ಮ ಚಿತ್ತ.

ಛೇ ಛೇ, ಇಷ್ಟೊಂದು ವೀರೋಪದೇಶ ಮಾಡಿದ ನಾನು ಇದನ್ನೇಕೆ ಬರೆದೆನೋ, ಸ್ತ್ರೀಗೆ ಶಾಪವಿದೆಯಂತೆ. ಆಕೆ ತನ್ನ ಹೃದಯದಲ್ಲಿ ಯಾವ ಗುಟ್ಟನ್ನೂ ಮುಚ್ಚಿಟ್ಟಿರಬಾರದೆಂದು. ನಾನೇನು ಮಾಡಲಿ?

ಬೆಂಗಳೂರು
೨೨-೧-೫೨

ಇತಿ ನಿಮ್ಮ ಚರಣ ದಾಸಿ
ಪೂರ್ಣಿ,

x x x x

## [೨೧]

**ಪೂರ್ಣಿಮಾ,**

**ಪ್ರತ್ಯುತ್ತರ ಬರೆಯಲಾರದಂತಹ ಪತ್ರವನ್ನು ಬರೆದು ಬಿಟ್ಟಿರುವಿ. ನನ್ನ ಗುಟ್ಟನ್ನು ಬಯಲು ಮಾಡಿರುವಿ. ನೀನು ಏನು ಬರೆದಿರುವಿಯೋ,**

ಅದು ನನ್ನ ನಿಜಪರಿಸ್ಥಿತಿಯ ಪೂರ್ಣ ಚಿತ್ರವಾಗಿದೆ. ನಿನಗೂ ಇದೇ ವಿಚಾರದ ಮಂಥನವಾಗುತ್ತಿರಬಹುದು. ಆದರೂ ನಿನ್ನ ಅಗಲಿಕೆ, ನಿನ್ನ ಬಳಲಿಕೆ, ನಿನ್ನ ಏಕಾಕಿತನ, ಇವನ್ನು ನೆನಸಿಕೊಂಡಾಗ ಎದೆಯ ಧೈರ್ಯ ವೆಲ್ಲವೂ ಕರಗಿ ಹೋಗುವುದು. ಹೀಗೆ ಕರಗಿ ಹೋದಾಗ ಮಾತ್ರ ನಾನು ಜಗತ್ತನ್ನು ನೋಡಿ ಹುಲಿಯನ್ನು ಕಂಡ ಹುಲ್ಲೆಯಂತೆ ಹೆದರಿಬಿಡುವೆನು. ಅಂತಹ ಸಮಯದಲ್ಲಿ ನೀನೇ ಬರೆದ ಈ ಪತ್ರಗಳನ್ನು ಓದಿದ ಮೇಲೆ ನನಗೆ ಬುದ್ಧಿ ಹೇಳಲಾರಂಭಿಸಿದಂತೆ ಭಾಸವಾಗುತ್ತದೆ.

ಇದು ಬುದ್ಧಿವಾದವಲ್ಲ, ಧೈರ್ಯ ಸಂಜೀವಿನಿ. ನೀನು ಅಬಲೆಯೋ ಸಬಲೆಯೋ ಈ ಪತ್ರವೇ ಹೇಳುತ್ತಿರುವುದು. ಇಷ್ಟೊಂದು ಧೈರ್ಯ ನಿನ್ನಲ್ಲಿ ಬಂದಿರುವಾಗ ನನ್ನ ಅಗಲಿಕೆಯನ್ನು ಸಂಯಮದಿಂದ ಇಂತು ಸಹಿಸಿಕೊಳ್ಳು ವುದಾದರೆ ನಿಜವಾಗಿಯೂ ನನ್ನ ಜೀವನಕ್ಕೆ ನೀನೇ ಧೈರ್ಯ ವಾಹಿನಿ.

ಪೂರ್ಣೀ, ನನ್ನ ಜೀವನದ ಪೂರ್ಣತೆಗಾಗಿಯೇ ಪೂರ್ಣಿಮೆಯಾಗಿ ನನ್ನ ಕೈ ಹಿಡಿದೆಯೆಂದು ನಿನ್ನನ್ನು ಹೊಗಳಿದರೆ ನೀನು ಉಬ್ಬಿಹೋಗಬೇಡ. ಇರುವ ಮಾತು ಇದ್ದಂತೆ ಹೇಳಿದರೆ ಉಬ್ಬಬೇಕೆ ?

ನೀನು ನಿನ್ನ ಪತ್ರದಲ್ಲಿ ಆರಿಸಿ ಬರೆದಿರುವ ಬಸವಣ್ಣನವರ ವಚನಾ ಮೃತವು ನನ್ನ ಎದೆತನವನ್ನೆಲ್ಲಾ ಕರಗಿಸಹತ್ತಿದೆ. "ಪ್ರೇಮ ಕರ್ತವ್ಯದ ದಾರಿಯ ಬಂಡೆಗಲ್ಲಾಗಿರಬಾರದು. ಕರ್ತವ್ಯಕ್ಕೆ ಶಕ್ತಿವಾಹಿನಿಯಾಗಿರ ಬೇಕು" ಎಂದೆನ್ನುವಂತೆ ನೀನು ನನ ಈ ಕರ್ಮಕ್ಷೇತ್ರದಲ್ಲಿ ಹೆಗಲ ಸರಿಸಮ ನಿಂತು ಹೆಗಲುಬ್ಬಿಸುವುದಕ್ಕೆ ತೊಡಗಿದ ಮೇಲೆ ನನಗೇನು ಕಡಮೆ? ಬಹುಶಃ ಗುರುರಾಯರು ನನ್ನ ಸಂಯಮವನ್ನು ಒರೆಗೆ ಹಚ್ಚಲೆಂದೇ ಅಗ ಲಿಕೆಯ ಅಧ್ಯಾಯವನ್ನು ಮುಗಿಸಿಲ್ಲ. ನಾನಿನ್ನು ಅಂಜುವುದಿಲ್ಲ. ಭಕ್ತ ಕಂಪಿತರಾದ ಗುರುರಾಯರ ಮುಂದೆ ಕೈಮುಗಿದು ಕೂಡಲ ಸಂಗಮೇಶ್ವರನ ಮುಂದೆ ಕೈಮುಗಿದು ಬಸವಣ್ಣನವರು ಅಂದ ಮಾತನ್ನೇ ಪುನರುಚ್ಚರಿಸಿ ಅದನ್ನೆ ನನ್ನ ಧ್ಯಾನಮಂತ್ರವನ್ನಾಗಿ ಮಾಡಿಕೊಂಡು ನನ್ನ ಜೀವನದ ಸಿಹಿ ಕಹಿಯನ್ನು ಸೈರಿಸುವೆನು. ನೀನು ಧೈರ್ಯಗೆಟ್ಟರೆ ಮಾತ್ರ ನನ್ನ ಧೈರ್ಯ

ವಿಂದೇನು ಫಲ? ನೀನು ಬೆನ್ನು ಕೊಡದಿದ್ದರೆ, ನನಗೆ ಬೇರೆಯವರು ಹೆಗಲ ಮೇಲೆತ್ತಿ ಕುಣಿದಾಡಿದರೇನು ಫಲ? ನೀನೂ ಸಹ ಶ್ರೀ ರಾಘವೇಂದ್ರ ಯತಿಗಳ ಮುಂದೆ ಈ ಕೆಳಗಿನಂತೆ ದಿನದಿನವೂ ಪ್ರಾರ್ಥಿಸುತ್ತಿರು.

"ಕಾಯದ ಕಳವಳಕಂಜಿ
ಕಾಯ್ವೆ ಎನ್ನನು ಜೀವನೋ
ಪಾಯಕ್ಕಂಜಿ ಈಯಯ್ಯ ಎನ್ನನು."

"ಯದ್ಭಾವಂ ತದ್ಭವತಿ"

"ಉರಿಬರಲಿ, ಸಿರಿಬರಲಿ; ಬೇಕು ಬೇಡೆನ್ನೆನು.
ಆನು ನಿಮ್ಮ ಹಾರೆನು- ಮಾನವರ ಬೇಡೆನು.
ಆಣೆ, ನಿಮ್ಮಾಣೆ: ಕೂಡಲ ಸಂಗಮದೇವ."

ಮಂತ್ರಾಲಯದ ಗುರುರಾಯರು ದಯಾಘನರು. ಅಗ್ನಿಯಲ್ಲಿ ಹಾಕಿ ಸುಟ್ಟರೂ ನೈ ಬೇಯದಂತೆ ನೋಡಿಕೊಳ್ಳುವರು. ಇಲ್ಲವಾದರೆ ನಾನು ಜಗತ್ತಿನ ಕಣ್ಣಿನಲ್ಲಿ ತೀರ ಅಪರಾಧಿಯಾಗಿ ಮೋಸಗಾರನಾಗಿ, ದ್ರೋಹಿಯಾಗಿ ಕಂಡುಕಂಡವರಿಗೆಲ್ಲ ಹೆದರಿ ದೇಶಭ್ರಷ್ಟನಾದಾಗ ನನ್ನನ್ನು ತಮ್ಮ ಬೃಂದಾವನದೆಡೆಗೆ ಬರುವಂತೆ ಪ್ರೇರೇಪಿಸಿ ಅಲ್ಲಿನ ಪೂಜ್ಯ ತುಂಗಭದ್ರೆಯಲ್ಲಿ ನನ್ನ ಪಾಪದ ಹೊರೆಯನ್ನೆಲ್ಲ ತೊಳೆಸುತ್ತಿದ್ದರೆ?

ಎಷ್ಟೊಂದು ದಯೆ ತೋರಿಸಿದರು? ಎಂತೆಂತಹ ಮಹಾಪಾಪಗಳನ್ನು ಕ್ಷಮಿಸಿದರು? ಜೀವನದ ಪರಿಶುದ್ಧತೆಗೆ ಎಂತಹ ಅವಕಾಶ ಕೊಟ್ಟರು ಅವರು? ಆದರೂ ಈ ಅಗಲಿಕೆಯನ್ನೇಕೆ ಕೊಟ್ಟಿರುವೆ ಎಂದೆನ್ನುವೆ ಏನು? ಅದಕ್ಕೆ ಉತ್ತರವೇನು ಗೊತ್ತೆ? ಅಷ್ಟು ಪಾಪಕ್ಕೆ ಇದೊಂದಾದರೂ ಶಿಕ್ಷೆ ಬೇಡವೆ ಪೂರ್ಣಿ? ಇದನ್ನು ಶಿಕ್ಷೆಯೆಂದು ನಾನು ಇನ್ನು ಮುಂದೆ ಕರೆಯುವುದಿಲ್ಲ. ಆ ಗುರುವಿನ ದೀಕ್ಷೆಯೆಂದು ಕರೆದುಕೊಳ್ಳುವೆನು.

ನೀನಿಂದು ಬರೆದಿರುವ ಪತ್ರವು ತುಳಸೀದಾಸನಿಗೆ ಮಮತಾದೇವಿಯು ಮಾಡಿದ ಉಪದೇಶದಂತಿದೆ. ಇದನ್ನು ಅನುದಿನ ಮನನ ಮಾಡಿ ದೀಕ್ಷೆ

ಯಲ್ಲಿ ಯಶಸ್ವಿಯಾಗುವೆನು. ನೀನು ಅನುಗ್ರಹಿಸು; ಆಶೀರ್ವದಿಸು. ನಾನು ಸ್ತ್ರೀಯನ್ನು ಒಂದು ಶಕ್ತಿಯೆಂದೇ ಭಾವಿಸಿಕೊಂಡಿರುವೆನಲ್ಲವೆ? ನಿನಗೆ ನನ್ನನ್ನು ಹರಸುವ ಅಧಿಕಾರವು ಹೆಂಡತಿಯೆಂಬ ಸ್ಥಾನಮಾನದಿಂದ ಇಲ್ಲವೆಂದು ಅವರಿವರು ವಾದಿಸಿದರೂ ವಾದಿಸಲಿ. ಶಕ್ತಿಸ್ವರೂಪಿಣಿಯಾಗಿ, ತಾಯಾಗಿ, ಹರಸಬಲ್ಲ ಅಧಿಕಾರ ನಿನಗೆ ಇದೆ ಎಂದು ನಾನು ಸಮರ್ಥಿಸಿಕೊಳ್ಳುವೆನು.

ಇಂತಹ ಪತ್ರಗಳನ್ನು ಇನ್ನು ಮುಂದೆ ಬರೆಯುತ್ತಿರು. ಇದು ವರೆಗೆ ನನ್ನನ್ನು ಸಂಸ್ಕರಿಸಿದವು ನನ್ನ ಪತ್ರಗಳು; ಇನ್ನುಮುಂದೆ ನಿನ್ನ ಪತ್ರಗಳು ನನ್ನನ್ನು ಸಂಸ್ಕರಿಸಲಿ.

ನಮಸ್ತೆ, ಪೂರ್ಣಿಮಾ,
ಇತಿ ನಿನ್ನ ಒಡನಾಡಿ.

—ಸಮಾಪ್ತಿ—



## ಚಂದಾದಾರಲ್ಲಿ ಅರಿಕೆ

ಈ "ಪೂರ್ಣಿಮಾ" ದೊಂದಿಗೆ ನಾವು ಕೊಡಬೇಕಾದ ನಾಲ್ಕೂ ಪುಸ್ತಕಗಳು ಸಲ್ಲಿಸಿದಂತಾಯಿತು. ನಿಮ್ಮ ನೆರವಿಗೆ ನಾವು ತುಂಬಾ ಋಣಿಗಳು. ಮುಂದಿನ ವರುಷವೂ ತಾವುಗಳು ಚಂದಾದಾರರಾಗಿ ನೆರವಾಗಬೇಕಾಗಿ ವಿನಂತಿ. ಹಾಗೆ ಇಷ್ಟವಿಲ್ಲದವರು ದಯವಿಟ್ಟು ನಮಗೆ ಮುಂಗಡವಾಗಿಯೇ ತಿಳಿಸಿ, ವ್ಹಿ. ಪಿ. ಮೂಲಕ ತಗಲುವ ವೆಚ್ಚವನ್ನು ಉಳಿಸುವಂತೆ ಮಾಲೆಗೆ ಸಹಾಯಮಾಡಬೇಕಾಗಿ ಪ್ರಾರ್ಥನೆ.

ಹುಬ್ಬಳ್ಳಿ
ಫೆಬ್ರುವರಿ ೧೯೫೩

ಸಂಚಾಲಕರು
ಆನಂದ ಗ್ರಂಥಮಾಲಾ.

## ಆನಂದ ಗ್ರಂಥಮಾಲೆಯ ಪ್ರಕಟನೆಗಳು

೧ ಅರ್ಪಣ: (ಮೋಪಾಸಾನ ಕತೆಗಳು—೧) ಪ್ರತಿಗಳು ತೀರಿವೆ

೨ ಹೂ ಅರಳಿತು:
(ತೆಲಗು ಕತೆಗಳು) ಶ್ರೀ ಪಿ. ವೆಂಕೋಬಾಚಾರ್ಯ — ೨-೪-೦

೩ ಮನೋರಾಜ್ಯ:
(ನಾಟಕ) ಪ್ರೊ. ರಂ. ಶ್ರೀ. ಮುಗಳಿ ಎಂ. ಎ. ಬಿ. ಟಿ. — ಸಾ. ೧-೧೨-೦ ಉ. ೨- ೮-೦

೪ ಪುಷ್ಪಹಾರ: (ಕಾದಂಬರಿ)
ಶ್ರೀಮತಿ ಜಯಲಕ್ಷ್ಮೀ ಶ್ರೀನಿವಾಸನ್ — ಸಾ. ೧- ೪-೦ ಉ. ೨- ೦-೦

೫ ಕಾಂತಂ ಮತ್ತು ಶರದ್ರಾತ್ರಿಗಳು:
(ಶೃಂಗಾರ ಚಿತ್ರಗಳು) ಶ್ರೀ. ಪಿ. ವೆಂಕೋಬಾಚಾರ್ಯ — ಸಾ. ೧- ೬-೦ ಉ. ೨- ೦-೦

೬ ಇವೆತ್: (ಮೋಪಾಸಾನ ಶೃಂಗಾರ ಕಾದಂಬರಿ)
ಶ್ರೀ. ಪಿ. ವೆಂಕೋಬಾಚಾರ್ಯ — ಸಾ. ೧-೧೨-೦ ಉ. ೧- ೮-೦

೭ ಸೈಮನ್ನನ ತಂದೆ:
(ಮೊಪಾಸಾ ಮತ್ತು ಇತರ ಕತೆಗಳು-ವಿವಿಧ ಲೇಖಕರು) — ಸಾ. ೧-೧೨-೦ ಉ. ೨- ೮-೦

೮ ಪೂರ್ಣಿಮಾ:
ಶ್ರೀ. ತಿ. ಸಿದ್ದಪ್ಪ, ಸಹಾಯ-ಸಂ. "ನವಯುಗ" — ಸಾ. ೧- ೪-೦ ಉ. ೨- ೪-೦

## ಶ್ರೀ ಪಿ. ವೆಂಕೋಬಾಚಾರ್ಯರ ಕೃತಿಗಳು

೧ ಹೂ ಅರಳಿತು: (ತೆಲಗು ಕತೆಗಳು) — ೨- ೪-೦

೨ ಕಾಂತಂ ಮತ್ತು ಶರದ್ರಾತ್ರಿಗಳು:
(ಶೃಂಗಾರ ಚಿತ್ರಗಳು) — ಸಾ. ೧- ೬-೦ ಉ. ೨-೮ -೦

೩ ಇವೆತ್:
(ಮೋಪಾಸಾನ ಕಾದಂಬರಿ) — ಸಾ. ೧-೧೨-೦ ಉ. ೨- ೮-೦

೪ ವೃಂದ: (ಸಾಮಾಜಿಕ ಕಾದಂಬರಿ) — ೧-೮-೦

೫ ಕುಲವಿಲ್ಲದ ಹೆಣ್ಣು ( ,, ) — ೧- ೮-೦

೬ ವಿಧಿ ತಂದ ವಧು: ( ,, ) — ಪ್ರತಿಗಳು ತೀರಿವೆ






**ಶ್ರೀ ತಿ. ಸಿದ್ದಪ್ಪ**

ಮುಖ ಸಂಪಾದಕರು :— "ನವಯುಗ" ಹುಬ್ಬಳ್ಳಿ.

**ಪತ್ರಿಕೋದ್ಯಮಿಗಳು ವಿಧಾಯಕ ಸಾಹಿತಿಯಾಗಬಲ್ಲರೇ ಎಂಬ ಪ್ರಯೋಗದತ್ತ ತಮ್ಮ ಲೇಖನಿಯನ್ನು ಹರಿಯಬಿಟ್ಟ ತರುಣರು.**

—ಸಂ